WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಮಂಗಳವಾರ, ಜುಲೈ ೨೪, ೨೦೧೨ (ಶ್ರಾವಣ ೨, ಶಕ ವರ್ಷ ೧೯೩೪) | ನಂ. ೫೦೪ |
|---|---|---|

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(4) ರಡಿ ಅಧಿಸೂಚನೆ**

**ಸಂಖ್ಯೆ: ಸಿಐ 265 ಎಸ್‌ಪಿಕ್ಯೂ 2012, ಬೆಂಗಳೂರು, ದಿನಾಂಕ: 23.7.2012**

1966 ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕದ ಕಾಯ್ದೆ ಸಂಖ್ಯೆ: 18) ವಿಧಿ 28(1)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ: 16.8.2011 ರಂದು ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3 ವಿಶೇಷ ಪತ್ರಿಕೆಯಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 300 ಎಸ್‌ಪಿಕ್ಯೂ 2011, ದಿನಾಂಕ: 11.8.2011ರ ಪ್ರಕಾರ ಸರ್ಕಾರವು ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಸ್ವತ್ತುಗಳ ಪ್ರದೇಶವನ್ನು ಬೆಂಗಳೂರು ಮೆಟ್ರೋ ರೈಲು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲು ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3)ರ ಪ್ರಕಾರ ಆದೇಶ ಹೊರಡಿಸಲಾಗಿದೆ.

ಆದುದರಿಂದ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28 (4) ರ (1966 ರ ಕರ್ನಾಟಕದ ಕಾಯ್ದೆ ಸಂಖ್ಯೆ: 18) ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಈ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಲಾಗಿರುವ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆಯೆಂದು ಈ ಮೂಲಕ ಘೋಷಿಸಲಾಗಿದೆ.

| ಕ್ರ. ಸಂ. | ಖಾತಾದಾರರ ಹೆಸರು | ಅನುಭವದಾರರ ಹೆಸರು | ಎಲ್‌ಎ/ ಸಿಟಿ ಸರ್ವೆ ನಂಬರ್ | ಸ್ವತ್ತಿನ ಸಂಖ್ಯೆ | ಭೂ ಸ್ವಾಧೀನಕ್ಕೆ ಒಳಪಟ್ಟ ವಿಸ್ತೀರ್ಣ ಚ.ಮೀ. | ಚಕ್ಕುಬಂದಿ (City Sy.) ನಕಾಶೆಯಂತೆ | | | | ನಿವೇಶನ / ಕಟ್ಟಡಗಳ ವಿವರಗಳು |
|---|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 | 9 | 10 | 11 |
| ಪ್ರದೇಶದ ಹೆಸರು: ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್ ನಂ. 95, ವಾರ್ಡ್ ಹೆಸರು: ಸುಭಾಷ್‌ನಗರ ಸ್ಥಳೀಯ ಕ್ಷೇತ್ರ ಸಂಖ್ಯೆ: 60 | | | | | | | | | | |
| 1. | ಎ.ಜಿ. ಇಂದುಮತಿ | ಎ.ಜಿ. ಇಂದುಮತಿ | ಎಲ್.ಎ. 60 ಸಿ.ಟಿ.ಎಸ್. 232ರ ಪೈಕಿ | 95 | 28.62 | ಸ್ವತ್ತಿನ ಸಂಖ್ಯೆ: 94 | ಮಾಗಡಿ ರಸ್ತೆ | ರಸ್ತೆ | ಸಿ.ಟಿ.ಎಸ್. 232 ಪೈಕಿ | ಖಾಲಿ ಜಾಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಸೋಮವಾರ, ಜುಲೈ ೩೦, ೨೦೧೨ (ಶ್ರಾವಣ ೮, ಶಕ ವರ್ಷ ೧೯೩೪) | ನಂ. ೫೧೨ |
|---|---|---|

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಅಧಿಸೂಚನೆ – 1

**ಸಂಖ್ಯೆ: ಸಿಐ 295 ಎಸ್‌ಪಿಕ್ಯೂ 2012, ಬೆಂಗಳೂರು, ದಿನಾಂಕ: 30.7.2012**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ 1966ರ (ಕರ್ನಾಟಕ ಕಾಯ್ದೆ 18) ವಿಧಿ 3(1) ರಂತೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಲಂ 2 ರಲ್ಲಿ ನಮೂದಿಸಿರುವ ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕು, ಬಿಡದಿ ಹೋಬಳಿ, ಶ್ಯಾನುಮಂಗಲ ಗ್ರಾಮದಲ್ಲಿನ ಸರ್ವೆ ನಂ. ಗಳಲ್ಲಿ ಈ ಕೆಳಕಂಡ ಪಟ್ಟಿಯಲ್ಲಿನ ಕಾಲಂ 6 ರಿಂದ 9 ರಲ್ಲಿ ತೋರಿಸಿರುವ ಚಕ್ಕುಬಂದಿಯುಳ್ಳ ಕಾಲಂ 3 ರಿಂದ 5 ರಲ್ಲಿ ನಮೂದಿಸಿರುವ ವಿಸ್ತೀರ್ಣದ ಜಮೀನುಗಳನ್ನು ಕೈಗಾರಿಕಾ ಪ್ರದೇಶವೆಂದು ಈ ಮೂಲಕ ಘೋಷಿಸಿದೆ.

ಗ್ರಾಮ : ಶ್ಯಾನುಮಂಗಲ | ಹೋಬಳಿ: ಬಿಡದಿ | ತಾಲ್ಲೂಕು: ರಾಮನಗರ | ಜಿಲ್ಲೆ: ರಾಮನಗರ

| ಕ್ರ. ಸಂ | ಸ.ನಂ. | | ವಿಸ್ತೀರ್ಣ | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನು ಎ–ಗುಂ | ಖರಾಬು ಎ–ಗುಂ | ಬಾಕಿ ಎ–ಗುಂ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** | **8** | **9** |
| 1 | 128/4 | 0–05 3/4 | – | 0–05 3/4 | ರಸ್ತೆ | 128/4ರ ಉಳಿಕೆ | ರಸ್ತೆ | 128/5 |
| 2 | 127/5 | 0–02 3/4 | – | 0–02 3/4 | ರಸ್ತೆ | 127/5ರ ಉಳಿಕೆ | ರಸ್ತೆ, 127/8 | 128 |
| 3 | 127/8 | 0–02 1/2 | – | 0–02 1/2 | ರಸ್ತೆ | 127/7 | ರಸ್ತೆ | 127/5 |
| | | **0–11** | | **0–11** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ – 2

### ಸಂಖ್ಯೆ: ಸಿಐ 295 ಎಸ್‌ಪಿಕ್ಯೂ 2012, ಬೆಂಗಳೂರು, ದಿನಾಂಕ: 30.7.2012

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ 1966ರ (ಕರ್ನಾಟಕ ಕಾಯ್ದೆ 18) ವಿಧಿ 1(3) ರಂತೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಲಂ 2 ರಲ್ಲಿ ನಮೂದಿಸಿರುವ ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕು, ಬಿಡದಿ ಹೋಬಳಿ, ಶ್ಯಾನುಮಂಗಲ ಗ್ರಾಮದಲ್ಲಿನ ಸರ್ವೆ ನಂ. ಗಳಲ್ಲಿ ಕಾಲಂ 6 ರಿಂದ 9 ರಲ್ಲಿ ತೋರಿಸಿರುವ ಚಕ್ಕುಬಂದಿಯುಳ್ಳ ಕಾಲಂ 3 ರಿಂದ 5 ರಲ್ಲಿ ನಮೂದಿಸಿರುವ ವಿಸ್ತೀರ್ಣದ ಜಮೀನುಗಳಿಗೆ ಮೇಲ್ಕಂಡ ಕಾಯ್ದೆಯ ಅಧ್ಯಾಯ 7ರ ವಿಧಿಗಳು ಈ ಅಧಿಸೂಚನೆಯು ಪ್ರಚುರಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಘೋಷಿಸಿದೆ.

ಗ್ರಾಮ : ಶ್ಯಾನುಮಂಗಲ ಹೋಬಳಿ: ಬಿಡದಿ ತಾಲ್ಲೂಕು: ರಾಮನಗರ ಜಿಲ್ಲೆ: ರಾಮನಗರ

| ಕ್ರ. ಸಂ | ಸ.ನಂ. | ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನು ಎ–ಗುಂ | ಖರಾಬು ಎ–ಗುಂ | ಬಾಕಿ ಎ–ಗುಂ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** | **8** | **9** |
| 1 | 128/4 | 0–05 3/4 | – | 0–05 3/4 | ರಸ್ತೆ | 128/4ರ ಉಳಿಕೆ | ರಸ್ತೆ | 128/5 |
| 2 | 127/5 | 0–02 3/4 | – | 0–02 3/4 | ರಸ್ತೆ | 127/5ರ ಉಳಿಕೆ | ರಸ್ತೆ, 127/8 | 128 |
| 3 | 127/8 | 0–02 1/2 | – | 0–02 1/2 | ರಸ್ತೆ | 127/7 | ರಸ್ತೆ | 127/5 |
| | | **0–11** | | **0–11** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ರ ಕಲಂ 28(1) ರನ್ವಯ ಅಧಿಸೂಚನೆ**

**ಸಂಖ್ಯೆ: ಸಿಐ 295 ಎಸ್‌ಪಿಕ್ಯೂ 2012, ಬೆಂಗಳೂರು, ದಿನಾಂಕ: 30.7.2012**

ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ಕೈಗಾರಿಕಾ ಪ್ರದೇಶದ ಸ್ಥಾಪನೆಗಾಗಿ ಕರ್ನಾಟಕ ರಾಜ್ಯ ಸರ್ಕಾರಕ್ಕೆ ಬೇಕಾಗಿದೆ.

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(1) (1966ರ 18ನೇ ನಂ.ಕಾಯ್ದೆಯ) ಪ್ರಕಾರದ ದತ್ತವಾದ ಅಧಿಕಾರದ ಮೇರೆಗೆ ಸದರಿ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶದಿಂದ ಈ ನೋಟೀಸು ಪ್ರಕಟಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾಗಿರುವ ತಾರೀಖಿನ ನಂತರ ಬೆಂಗಳೂರು ವಿಭಾಗದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಅನುಮತಿಯಿಲ್ಲದೆ ಸದರಿ ಜಮೀನುಗಳನ್ನು ವಿಲೆ ಮಾಡಲು ಒಪ್ಪಂದ ಕ್ರಯ, ಭೋಗ್ಯ, ಲೀಸ್, ಅದಲು–ಬದಲು ವಗೈರೆ ಮಾಡುವಂತಿಲ್ಲ ಮತ್ತು ಸದರಿ ಜಮೀನುಗಳಲ್ಲಿ ಈ ಅಧಿಸೂಚನೆ ಪ್ರಕಟಣೆ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದರೂ 1894ರ ಭೂಸ್ವಾಧೀನ ಕಾಯ್ದೆ ವಿಧಿ 24 (ನಿಯಮ 7) ಕರ್ನಾಟಕ ತಿದ್ದುಪಡಿ ಮಾಡಿರುವ ಕಾಯ್ದೆ 17:1961 ಮತ್ತು 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 30ನ್ನು ಒದಿಸಿಕೊಳ್ಳುವ ಮೇರೆಗೆ ಪರಿಹಾರಧನ ನಿಗಧಿ ಮಾಡುವಾಗ ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಮತ್ತು ಅಂತಿಮವಾಗಿ ಜಮೀನುಗಳನನ್ನು ಸ್ವಾಧೀನ ಪಡಿಸಿಕೊಳ್ಳಲಾಗುವುದು.

ಈ ಜಮೀನುಗಳ ಒಂದು ನಕ್ಷೆಯನ್ನು ಬೆಂಗಳೂರು ವಿಭಾಗದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ, ವಿಶೇಷ ಭೂಸ್ವಾಧೀನಾಧಿಕಾರಿ–2, ಅರವಿಂದ ಭವನ, 1ನೇ ಮಹಡಿ, ನೃಪತುಂಗ ರಸ್ತೆ, ಬೆಂಗಳೂರು – 560 001 ಯವರ ಕಛೇರಿ ಪರಿಶೀಲನೆಗೆ ಇಟ್ಟಿದೆ.

ಗ್ರಾಮ : ಶ್ಯಾನುಮಂಗಲ ಹೋಬಳಿ: ಬಿಡದಿ ತಾಲ್ಲೂಕು: ರಾಮನಗರ ಜಿಲ್ಲೆ : ರಾಮನಗರ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಕ್ಕೊಳಪಟ್ಟ ವಿಸ್ತೀರ್ಣ | | | ತಹರೆ | ಆಕಾರ | ಚೆ ಕ್ಕು ಬ ಂದಿ | | | |
|---|---|---|---|---|---|---|---|---|---|---|---|---|
| | | | | ಐನು ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1. | ಪಿಳ್ಳಮ್ಮ ಕೋಂ ಚಿಕ್ಕಣ್ಣ ರಾಮಯ್ಯ ಬಿನ್ ಸಂಪಂಗಯ್ಯ, ಕೆಐಎಡಿಬಿ | ಪಿಳ್ಳಮ್ಮ ಕೋಂ ಚಿಕ್ಕಣ್ಣ ರಾಮಯ್ಯ ಬಿನ್ ಸಂಪಂಗಯ್ಯ, ಕೆಐಎಡಿಬಿ | 128/4 | 0–05 ಱ | – | 0–05 ಱ | ಖುಷ್ಕಿ | 0–19 | ರಸ್ತೆ | 128/4ರ ಉಳಿಕೆ | ರಸ್ತೆ | 128/5 |
| 2. | ಮುದ್ದಹನುಮಕ್ಕ ಕೋಂ ಲೇಟ್ ಮಾರಣ್ಣ, ಪುಟ್ಟಮಾರಯ್ಯ ಬಿನ್ ಲೇಟ್ ಮಾರಣ್ಣ | ಮುದ್ದಹನುಮಕ್ಕ ಕೋಂ ಲೇಟ್ ಮಾರಣ್ಣ, ಪುಟ್ಟಮಾರಯ್ಯ ಬಿನ್ ಲೇಟ್ ಮಾರಣ್ಣ | 127/5 | 0–02 3/4 | – | 0–02 3/4 | ಖುಷ್ಕಿ | 0–09 | ರಸ್ತೆ | 127/5ರ ಉಳಿಕೆ | ರಸ್ತೆ 127/8 | 128 |
| | | | 127/8 | 0–02 1/2 | – | 0–02 1/2 | ಖುಷ್ಕಿ | 0–08 | ರಸ್ತೆ | 127/7 | ರಸ್ತೆ | 127/5 |
| ಒಟ್ಟು | | | | **0–11** | | **0–11** | | | | | | |

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಮಂಗಳವಾರ, ಜುಲೈ ೨೪, ೨೦೧೨ (ಶ್ರಾವಣ ೨, ಶಕ ವರ್ಷ ೧೯೩೪) | ನಂ. ೫೦೫ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 06 ಚುರಾಸ 2012, ಬೆಂಗಳೂರು, ದಿನಾಂಕ: 24ನೇ ಜುಲೈ, 2012**

ಇದಕ್ಕೆ ಲಗತ್ತಿಸಿರುವ ದಿನಾಂಕ: 23ನೇ ಜುಲೈ 2012ರ **ಭಾರತದ ಉಪ ರಾಷ್ಟ್ರಪತಿ ಪದಕ್ಕೆ ಸ್ಪರ್ಧಿಸಿರುವ ಅಭ್ಯರ್ಥಿಗಳ ಹೆಸರುಗಳನ್ನೊಳಗೊಂಡ ನಮೂನೆ 5 ರಲ್ಲಿಯ ಪಟ್ಟಿಯನ್ನು** ಸಾರ್ವಜನಿಕರ ತಿಳುವಳಿಕೆಗಾಗಿ ಈ ಮೂಲಕ ಮನಃ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಶಾಮಯ್ಯ**
ಜಂಟಿ ಮುಖ್ಯ ಚುನಾವಣಾಧಿಕಾರಿ ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ. (ಚುನಾವಣೆಗಳು)

**ನಮೂನೆ – 5**

(ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿ ಚುನಾವಣಾ ನಿಯಮಗಳು, 1974ರ 6ನೇ ನಿಯಮ ನೋಡಿ)

**ಭಾರತದ ಉಪ–ರಾಷ್ಟ್ರಪತಿಯವರ ಸ್ಥಾನಕ್ಕೆ ಚುನಾವಣೆ ಸ್ಪರ್ಧಿಸಿರುವ ಅಭ್ಯರ್ಥಿಗಳ ಪಟ್ಟಿ**

| ಕ್ರ. ಸಂ. | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯ ವಿಳಾಸ |
|---|---|---|
| 1. | ಶ್ರೀ ಜಸ್ವಂತ್ ಸಿಂಗ್ | ಗ್ರಾಮ – ಮೇವಾನಗರ್,<br>ತಹಸೀಲ್ – ಪಂಚ್‌ಪಾದ್ರ.<br>ಜಿಲ್ಲೆ – ಬಾರ್ಮರ್, ರಾಜಾಸ್ಥಾನ್ |
| 2. | ಶ್ರೀ ಎಂ. ಹಮೀದ್ ಅನ್ಸಾರಿ | 6, ಬಂಗ್ಲೋ, ಮೌಲಾನ ಆಜ್ಹಾದ್ ರೋಡ್, ನವದೆಹಲಿ |

ಸ್ಥಳ: ನವದೆಹಲಿ
ದಿನಾಂಕ: 23ನೇ ಜುಲೈ, 2012

**ಟಿ.ಕೆ. ವಿಶ್ವನಾಥನ್**
ಚುನಾವಣಾಧಿಕಾರಿ,
ಭಾರತದ ಉಪ ರಾಷ್ಟ್ರಪತಿ ಚುನಾವಣೆ, 2012
ಮತ್ತು ಮಹಾ ಕಾರ್ಯದರ್ಶಿ, ಲೋಕಸಭಾ.

## PERSONNEL AND ADMINISTRATIVE REFORMS SECRETARIAT

### NOTIFICATION

**NO. DPAR 06 CHURASA 2012, Bangalore, DATED 24TH JULY, 2012**

The accompanying list of contesting candidates in Form 5, dated the 23rd July, 2012, relating to the election to the office of Vice-President of India, is hereby republished for information of the General Public.

By Order and in the Name of the Governor of Karnataka,

**T. SHAMAIAH**
Joint Chief Electoral Officer &
Ex-Officio Joint Secretary to Govt.,
D.P.A.R. (Elections)

**FORM 5**

(*See* rule 6 of the Presidential and Vice-Presidential Elections Rules, 1974)

**ELECTION TO THE OFFICE OF VICE-PRESIDENT OF INDIA**

*List of Contesting Candidates*

| Sl. No. | Name of candidate | Address of candidate |
|---|---|---|
| 1. | Shri Jaswant Singh | Village-Mewanagar, Teh.-Panchpadra, Distt. Barmer, Rajasthan |
| 2. | Shri M. Hamid Ansari | 6, Bunglow, Maulana Azad Road, New Delhi |

*Place: New Delhi*
*Date: 23rd July,2012*

(T.K. VISWANATHAN)
RETURNING OFFICER
FOR ELECTION TO THE OFFICE OF
VICE-PRESIDENT OF INDIA, 2012
AND
SECRETARY GENERAL, LOK SABHA

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಬುಧವಾರ, ಜುಲೈ ೨೫, ೨೦೧೨ (ಶ್ರಾವಣ ೩, ಶಕ ವರ್ಷ ೧೯೩೪) | ನಂ. ೫೦೬ |
|---|---|---|



## ಕರ್ನಾಟಕ ಸರ್ಕಾರದ ನಡವಳಿಗಳು

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:–** ಸಹಕಾರ ಇಲಾಖೆಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರುಗಳ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ಪೌರಾಡಳಿತ ಸೇವೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ – ಆದೇಶ.

**ಓದಲಾಗಿದೆ:–**

1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 38 ಆರ್‌ಡಿಸಿ 2004 ದಿನಾಂಕ:06/08/2004.
2. ದಿನಾಂಕ:18/04/2006 ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ79 ಎಲೆಸೇ 2006.
3. ದಿನಾಂಕ:25/02/2008ರ ಸಹಕಾರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 49 ಎಸಸೇ 2008.
4. ದಿನಾಂಕ:03/07/2010 ಸಹಕಾರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 118 ಎಲೆಸೇ 2010.
5. ಕರ್ನಾಟಕ ರಾಜ್ಯದ 2010–11ನೇ ಸಾಲಿನಲ್ಲಿ ಮಂಡಿಸಲಾದ ಆಯವ್ಯಯ.
6. ಸಹಾಯಕ ನಿರ್ದೇಶಕರುಗಳು ಹಾಜರು ಪಡಿಸಿರುವ ಪ್ರಮಾಣ ಪತ್ರಗಳು ದಿನಾಂಕ: 23/12/2011.
7. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಪೌನಿ:ಸಿಬ್ಬಂದಿ: ಕೆಎಂಎಎಸ್:ಸಿಆರ್:37:2011–12, ದಿನಾಂಕ: 02/01/2012.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಹೆಚ್ಚುವರಿ ಸಿಬ್ಬಂದಿಯಾಗಿ ಗುರುತಿಸಲಾದ ಸಿಬ್ಬಂದಿಗಳನ್ನು ಸರ್ಕಾರದ ಇತರೆ ಇಲಾಖೆಗಳಲ್ಲಿ ನಿಯೋಜನೆ ಅಥವಾ ಖಾಯಂ ವರ್ಗಾವಣೆ ಮೂಲಕ ವಿಲೀನಗೊಳಿಸುವ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿದೆ. ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೋಬೇಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು 1977ರಡಿ ಕರ್ನಾಟಕ ಲೋಕಸೇವಾ ಆಯೋಗದಿಂದ ಪತ್ರಾಂಕಿತ ಪರೀಕ್ಷಾರ್ಥಿಗಳಾಗಿ

ಆಯ್ಕೆಯಾಗಿರುವ ಅಭ್ಯರ್ಥಿಗಳನ್ನು ಸಹಕಾರ ಇಲಾಖೆಯಲ್ಲಿ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರುಗಳ ಹುದ್ದೆಯಲ್ಲಿ ನೇಮಕ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆಯ ಸಹಾಯಕ ನಿರ್ದೇಶಕರುಗಳು ಸಹಕಾರ ಇಲಾಖೆಯಲ್ಲಿ ಹೆಚ್ಚುವರಿಯಾಗಿರುವುದರಿಂದ ಅವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಗೆ ನೀಡಲು ಸಹಮತಿ ಇರುವುದಾಗಿ ಇವರ ಸೇವೆಯು ಅವಶ್ಯಕವಿದ್ದಲ್ಲಿ ತಿಳಿಸುವಂತೆ ಕೋರಲಾಗಿದೆ. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿರನ್ವಯ 1) ಡಾ॥ ಕೆ.ಮುರಳಿಧರ 2) ಶ್ರೀಮತಿ ಪ್ರಭಾ.ಎಲ್.ಎಂ. 3) ಶ್ರೀ ರುದ್ರಮುನಿ ಬಿ.ಕೆ. 4) ಶ್ರೀ ಮಾಯಣ್ಣಗೌಡ .ಕೆ. 5) ಶ್ರೀ ಕೆ.ನರಸಿಂಹ ಮೂರ್ತಿ 6) ಶ್ರೀ ದೇವೇಂದ್ರಪ್ಪ .ಡಿ ಇವರುಗಳ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಗೆ ಬಿಟ್ಟುಕೊಡಲು ಸಹಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಲ್ಲಿ 2010–11ನೇ ಸಾಲಿನ ಕರ್ನಾಟಕ ರಾಜ್ಯದ ಆಯ್ಯವ್ಯಯದ ಕಂಡಿಕೆ 300 ರಲ್ಲಿ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಹಲವು ಹುದ್ದೆಗಳು ತೆರವಾಗಿದ್ದು, ಇತರೆ ಇಲಾಖೆಗಳಲ್ಲಿ ಮತ್ತು ಕೆಲವು ಸಾರ್ವಜನಿಕ ಉದ್ದಿಮೆಗಳಲ್ಲಿ ಹೆಚ್ಚುವರಿ ಸಿಬ್ಬಂದಿ ಇರುವುದು ಕಂಡುಬಂದಿದೆ. ಇಂತಹ ಹೆಚ್ಚುವರಿ ಸಿಬ್ಬಂದಿಯನ್ನು ಅಗತ್ಯವಿರುವ ಇಲಾಖೆಗಳಿಗೆ ಕಡ್ಡಾಯವಾಗಿ ವರ್ಗಾವಣೆ ಮಾಡಲು ಕ್ರಮ ಕೈಗೊಳ್ಳಲಾಗುವುದು ಎಂದು ಪ್ರಸ್ತಾಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (6)ರಲ್ಲಿ ಸಹಕಾರ ಇಲಾಖೆಯ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರುಗಳಾಗಿರುವ ಶ್ರೀ ಕೆ.ನರಸಿಂಹಮೂರ್ತಿ, ಶ್ರೀ ಕೆ.ಮಾಯಣ್ಣಗೌಡ, ಶ್ರೀ ಡಿ.ಕೆ.ರುದ್ರಮುನಿ ಇವರುಗಳು ನೋಟರಿಯವರಿಂದ ದೃಢೀಕರಿಸಿದ ಪ್ರಮಾಣ ಪತ್ರವನ್ನು ಹಾಜರುಪಡಿಸಿ ತಾವು ಸಹಕಾರ ಇಲಾಖೆಯಲ್ಲಿ ಹೆಚ್ಚುವರಿ ಅಧಿಕಾರಿಗಳಾಗಿದ್ದು, ಪ್ರಸ್ತುತ ನಿಯೋಜನೆ ಮೇಲೆ ನಗರಾಭಿವೃದ್ಧಿ ಇಲಾಖೆಯ ಪೌರಾಡಳತ ಸೇವೆಯಲ್ಲಿ ಮುಖ್ಯಾಧಿಕಾರಿಗಳು ಶ್ರೇಣಿ–1 ವೃಂದದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ತಮ್ಮ ಸೇವೆಗಳನ್ನು ನಗರಾಭಿವೃದ್ಧಿ ಇಲಾಖೆಯ ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ–1 ಹುದ್ದೆಗೆ ವಿಲೀನಗೊಳಿಸಲು ಸಹಕಾರ ಇಲಾಖೆಯಿಂದ ಸಹಮತಿ ಇದ್ದು, ಇದಕ್ಕೆ ತಮ್ಮ ಸಹಮತಿಯೂ ಸಹ ಇರುವುದಾಗಿ ಮತ್ತು ತಮ್ಮಗಳ ಮೂಲ ಹುದ್ದೆಯ ವೇತನ ಶ್ರೇಣಿ (ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರುಗಳ) ರೂ.11400–21600 ಶ್ರೇಣಿಯಿಂದ ಪೌರಾಡಳಿತ ಮುಖ್ಯಾಧಿಕಾರಿ ಶ್ರೇಣಿಯ–1 ಹುದ್ದೆಯ ವೇತನ ಶ್ರೇಣಿ ರೂ.10800–20500ಕ್ಕೆ ನಿಗಧಿಪಡಿಸಲು ತಮ್ಮ ಒಪ್ಪಿಗೆ ಇರುತ್ತದೆ ಎಂದು ದಾಖಲೆ ಪತ್ರದಲ್ಲಿ ಲಿಖಿತ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರನ್ವಯ ನಗರಾಭಿವೃದ್ಧಿ ಇಲಾಖೆಯ ಪೌರಾಡಳಿತ ಸೇವೆಯ ಮುಖ್ಯಾಧಿಕಾರಿಗಳು ಶ್ರೇಣಿ–1 ವೃಂದಕ್ಕೆ ಮಂಜೂರಾಗಿರುವ ಒಟ್ಟು ಹುದ್ದೆಗಳ ಸಂಖ್ಯೆ 94 ಆಗಿದ್ದು ಇವುಗಳಲ್ಲಿ

1) ನೇರ ನೇಮಕಾತಿ ಮೂಲಕ ಭರ್ತಿ ಮಾಡಬೇಕಾದ ಹುದ್ದೆಗಳ ಸಂಖ್ಯೆ: 32
2) ಮುಂಬಡ್ತಿ ಮೂಲಕ ತುಂಬಬೇಕಾದ ಹುದ್ದೆಗಳ ಸಂಖ್ಯೆ: 62

ಈ ಆದೇಶ ಹೊರಡಿಸುವ ದಿನಾಂಕದವರೆಗೆ ಅನ್ವಯವಾಗುವಂತೆ ಲಭ್ಯವಿರುವ ಮಾಹಿತಿಯ ಪ್ರಕಾರ ಈಗಾಗಲೇ 11 ಹುದ್ದೆಗಳಿಗೆ ಮುಖ್ಯಾಧಿಕಾರಿ ಶ್ರೇಣಿ–1 ವೃಂದದ ಅಭ್ಯರ್ಥಿಗಳು ಕರ್ನಾಟಕ ಲೋಕಸೇವಾ ಆಯೋಗದಿಂದ ಸ್ಪರ್ಧಾರ್ತಕ ಪರೀಕ್ಷೆಗಳ ಮೂಲಕ ಆಯ್ಕೆಯಾಗಿ ನೇರ ನೇಮಕಾತಿ ನಿರೀಕ್ಷಣೆಯಲ್ಲಿರುತ್ತಾರೆ. ಮತ್ತು 18 ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಅಸುಇ 178 ಸೇನೆನಿ 2010 ದಿನಾಂಕ: 14–10–2011ರನ್ವಯ ಕರ್ನಾಟಕ ಲೋಕಸೇವಾ ಆಯೋಗಕ್ಕೆ ತಿಳಿಸಲಾಗಿದೆ. ಇದರಿಂದ ನೇರ ನೇಮಕಾತಿ ಖೋಟದ 32 ಹುದ್ದೆಗಳಲ್ಲಿ 29 ಹುದ್ದೆಗಳನ್ನು ತುಂಬಲು ಕ್ರಮ ತೆಗೆದುಕೊಳ್ಳಲಾಗಿದೆ. ಉಳಿದ ನೇರ ನೇಮಕಾತಿ ಖೋಟದಲ್ಲಿನ 3 ಹುದ್ದೆಗಳು ಈ ಕೆಳಗಿನ ರೀತಿಯಲ್ಲಿ ತೆರವಾಗಿರುತ್ತವೆ / ಖಾಲಿ ಇರುತ್ತವೆ:–

1) ನೇಮಕಾತಿಯಾಗದೆ ಖಾಲಿ ಇರುವ ಹುದ್ದೆ –1
2) ಸರ್ಕಾರದ ಅಧಿಸೂಚನೆ ಸಂಖ್ಯೆ:ನಅಇ 35 ಇಎಂಸಿ 2012 ದಿನಾಂಕ: 10–7–2012 ರಂದು ಮುಖ್ಯಾಧಿಕಾರಿ ಶ್ರೇಣಿ–1 ವೃಂದದಿಂದ ಪೌರಾಯುಕ್ತರು ಶ್ರೇಣಿ–2 ವೃಂದಕ್ಕೆ ಶ್ರೀ ಸಿ.ಆರ್.ರಂಗಸ್ವಾಮಿ ಯವರಿಗೆ ಬಡ್ತಿ ನೀಡಿರುವುದರಿಂದ ತೆರವಾಗಿರುವ ಹುದ್ದೆ –1
3) ದಿನಾಂಕ:10–7–2012 ರಂದು ಶ್ರೀ ಮಂಜುನಾಥ ಹೆಗಡೆ ಇವರು ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ಹುದ್ದೆಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ ಮುಖ್ಯಾಧಿಕಾರಿ ಶ್ರೇಣಿ–1 ವೃಂದದ ಹುದ್ದೆಗೆ ರಾಜೀನಾಮೆ ನೀಡಿ ಕೆ.ಸಿ.ಎಸ್.ಆರ್.ನಿಯಮ 252–ಬಿ ರನ್ವಯ ಮುಖ್ಯಾಧಿಕಾರಿ ಶ್ರೇಣಿ–1 ಹುದ್ದೆಯ ಕರ್ತವ್ಯದಿಂದ ದಿನಾಂಕ:10–7–2012 ರಂದು ಬಿಡುಗಡೆಯಾಗಿರುವುದರಿಂದ ತೆರವಾಗಿರುವ ಹುದ್ದೆ –1.

ಪ್ರಸ್ತುತ ಮುಖ್ಯಾಧಿಕಾರಿ ಶ್ರೇಣಿ–1 ವೃಂದದ ನೇರ ನೇಮಕಾತಿ ಖೋಟಾದಿಂದ ತುಂಬಬೇಕಾದ ಒಟ್ಟು 3 ಹುದ್ದೆಗಳು ಈ ಆದೇಶ ಹೊರಡಿಸುವ ದಿನಾಂಕದವರೆಗೆ ಅನ್ವಯವಾಗುವಂತೆ ತೆರವಾಗಿರುತ್ತವೆ. ಇವುಗಳನ್ನು ಸಹಕಾರ ಇಲಾಖೆಯಲ್ಲಿ ಹೆಚ್ಚುವರಿಯಾಗಿರುವ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರುಗಳಾದ ಶ್ರೀ ನರಸಿಂಹಮೂರ್ತಿ ಕೆ., ಶ್ರೀ ಮಾಯಣ್ಣಗೌಡ ಕೆ. ಮತ್ತು ಶ್ರೀ ರುದ್ರಮುನಿ ಬಿ.ಕೆ. ಇವರುಗಳು ಈಗಾಗಲೇ ನಗರಾಭಿವೃದ್ಧಿ ಇಲಾಖೆಯ ಪೌರಾಡಳಿತ ಸೇವೆಯಲ್ಲಿ ಮುಖ್ಯಾಧಿಕಾರಿ ಶ್ರೇಣಿ–1 ವೃಂದದಲ್ಲಿ ನಿಯೋಜನೆ ಮೇಲೆ ಸೇವೆ

ಸಲ್ಲಿಸುತ್ತಿರುವುದರಿಂದ ಇವರುಗಳ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲು ಸಹಕಾರ ಇಲಾಖೆಯು ಸಹಮತಿ ನೀಡಿರುವುದರಿಂದ ಹಾಗೂ ಸದರಿ ಅಧಿಕಾರಿಗಳ ಕೋರಿಕೆಗಳನ್ನು ಮತ್ತು ಇವರು ಪ್ರಮಾಣ ಪತ್ರದ ಮೂಲಕ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಗಣಿಸಿ, ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ-1 ವೃಂದದ ನೇರ ನೇಮಕಾತಿ ಖೋಟಾದಲ್ಲಿನ ಖಾಲಿ ಇರುವ 03 ಹುದ್ದೆಗಳಿಗೆ ವಿಲೀನಗೊಳಿಸಲು/ ವರ್ಗಾವಣೆ ಮೂಲಕ ಭರ್ತಿ ಮಾಡಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 63 ಇಎಂಸಿ 2010, ಬೆಂಗಳೂರು, ದಿನಾಂಕ: 25-07-2012**

ಮೇಲೆ ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ವಿವರಿಸಿರುವ ಕಾರಣಗಳಿಂದಾಗಿ ಸಹಕಾರ ಇಲಾಖೆಯಲ್ಲಿ ಹೆಚ್ಚುವರಿಯಾಗಿರುವ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರುಗಳಾದ ಶ್ರೀ ನರಸಿಂಹಮೂರ್ತಿ.ಕೆ, ಶ್ರೀ ಮಾಯಣ್ಣಗೌಡ.ಕೆ. ಮತ್ತು ಶ್ರೀ ರುದ್ರಮುನಿ.ಬಿ.ಕೆ. ಇವರುಗಳನ್ನು ನಗರಾಭಿವೃದ್ಧಿ ಇಲಾಖೆಯ ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ-1 ವೃಂದದ ಪ್ರಸ್ತುತ ವೇನತ ಶ್ರೇಣಿ ರೂ. 21600-600-24600-700-28800-800-33600-900-39000-1050-40050 (ಹಿಂದಿನ ವೇತನ ಶ್ರೇಣಿ 10800-20025) ನೇರ ನೇಮಕಾತಿ ಖೋಟಾದಲ್ಲಿ ಭರ್ತಿ ಮಾಡಲು ಲಭ್ಯವಿದ್ದ ಮೂರು(3)ಖಾಲಿ ಹುದ್ದೆಗಳಿಗೆ ವಿಲೀನಗೊಳಿಸಿ /ವರ್ಗಾವಣೆ ಮುಖಾಂತರ ಭರ್ತಿ ಮಾಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಆದೇಶಿಸಿದೆ.

1. ಸಂಬಂಧಪಟ್ಟ ಅಧಿಕಾರಿಗಳು ಸಕ್ರಮವಾಗಿ ನೇಮಕಗೊಂಡಿರಬೇಕು ಹಾಗೂ ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು.
2. ಸಂಬಂಧಪಟ್ಟ ಅಧಿಕಾರಿಗಳ ಖಾಯಂ ವಿಲೀನ/ವರ್ಗಾವಣೆಯನ್ನು ಸದರಿಯವರ ಸ್ವಂತ ಕೋರಿಕೆ ಮೇರೆಗೆ ಮಾಡಿರುವುದರಿಂದ ಈ ಅಧಿಕಾರಿಗಳು ಸಹಕಾರ ಇಲಾಖೆಯ, ಸಹಕಾರ ಸಂಘಗಳ ಲೆಕ್ಕ ಪರಿಶೋಧನ ಸಹಾಯಕ ನಿರ್ದೇಶಕರುಗಳ ವೃಂದದ ಜೇಷ್ಠತೆಯನ್ನು ಬಿಟ್ಟುಕೊಟ್ಟು ಪೌರಾಡಳಿತ ಸೇವೆಯಲ್ಲಿನ ಮುಖ್ಯಾಧಿಕಾರಿ ಶ್ರೇಣಿ-1 ವೃಂದದ ಜೇಷ್ಠತಾ ಪಟ್ಟಿಯಲ್ಲಿ ಕೊನೆಯ ಸ್ಥಾನವನ್ನು ಹೊಂದಬೇಕಾಗುತ್ತದೆ.
3. ಸದರಿಯವರು ಈ ರೀತಿ ಒಂದು ಜೇಷ್ಠತಾ ಘಟಕದಿಂದ ಮತ್ತೊಂದು ಜೇಷ್ಠತಾ ಘಟಕ್ಕೆ ಮತ್ತೊಮ್ಮೆ ಬದಲಾವಣೆಯನ್ನು ಹೊಂದಲು ಅರ್ಹರಿರುವುದಿಲ್ಲ.
4. ಸಂಬಂಧಪಟ್ಟ ಅಧಿಕಾರಿಗಳು ವರ್ಗಾವಣೆ ಮೂಲಕ ನೇಮಿಸಿರುವ ಹುದ್ದೆಗೆ ನಿಗಧಿಪಡಿಸಿರುವ ಇಲಾಖಾ ಪರೀಕ್ಷೆಗಳನ್ನು 2 ವರ್ಷದ ಒಳಗಾಗಿ ಪಾಸು ಮಾಡತಕ್ಕದ್ದು. ಇಲ್ಲದಿದ್ದಲ್ಲಿ ಅವರ ಸೇವೆಯನ್ನು ಮಾತೃ ಇಲಾಖೆಯಾದ ಸಹಕಾರ ಇಲಾಖೆಗೆ ಹಿಂದಿರುಗಿಸಲಾಗುವುದು.
5. ಸಂಬಂಧಪಟ್ಟ ಅಧಿಕಾರಿಗಳ ವೇತನವನ್ನು ಪೌರಾಡಳಿತ ಇಲಾಖೆಯ ಮುಖ್ಯಾಧಿಕಾರಿ ಶ್ರೇಣಿ-1 ಹುದ್ದೆಯ ಹಾಲಿ ವೇತನ ಶ್ರೇಣಿ ರೂ.21600-600-24600-700-28800-800-33600-900-39000-1050-40050 (ಹಿಂದಿನ ವೇತನ ಶ್ರೇಣಿ 10800-20025) ಕನಿಷ್ಠ ವೇತನಕ್ಕೆ ನಿಗಧಿಗೊಳಿಸಲಾಗುವುದು.
6. ಸದರಿಯವರು ಸ್ವಂತ ಕೋರಿಕೆ ಮೇಲೆ ನಗರಾಭಿವೃದ್ಧಿ ಇಲಾಖೆಯ ಪೌರಾಡಳಿತ ಸೇವೆಯಲ್ಲಿ ವಿಲೀನಗೊಳ್ಳುತ್ತಿರುವುದರಿಂದ ಯಾವುದೇ ಸೇರುವಿಕೆ ಕಾಲ ಮತ್ತು ಪ್ರಯಾಣ ಭತ್ಯೆಗೆ ಅರ್ಹರಿರುವುದಿಲ್ಲ.
7. ಈ ವಿಲೀನ ಪ್ರಕ್ರಿಯೆ ಒಂದು ಬಾರಿ ಕ್ರಮವಾಗಿರುತ್ತದೆ (one time process). ಪೌರಸೇವಾ ವೃಂದದ ಮುಖ್ಯಾಧಿಕಾರಿ ಶ್ರೇಣಿ-1 ವೃಂದದ ನೇರ ನೇಮಕಾತಿಯ ಖೋಟಾದ ಹುದ್ದೆಗಳನ್ನು ಪೂರ್ಣವಾಗಿ ಭರ್ತಿಮಾಡಲು ಕ್ರಮ ತೆಗೆದುಕೊಂಡಿರುವುದರಿಂದ ಇನ್ನು ಮುಂದೆ ನಿಯೋಜನೆ ಮೇಲೆ ಮುಖ್ಯಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅನ್ಯ ಇಲಾಖೆಯ ಅಧಿಕಾರಿ/ನೌಕರರುಗಳು ತಮ್ಮನ್ನು ಪೌರ ಸೇವೆಯಲ್ಲಿನ ಮುಖ್ಯಾಧಿಕಾರಿಗಳ ಹುದ್ದೆಯಲ್ಲಿ ಖಾಯಂ ವಿಲೀನ/ವರ್ಗಾವಣೆ ಮುಖಾಂತರ ನೇಮಕಾತಿ ಮಾಡುವಂತೆ ಕೋರಿ ಸಲ್ಲಿಸುವ ಕೋರಿಕೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ. ಮತ್ತು ಈ ಆದೇಶವನ್ನು ಇಂತಹ ಕೋರಿಕೆಗಳನ್ನು ಪರಿಶೀಲಿಸಲು ಪೂರ್ವ ನಿದರ್ಶನವನ್ನಾಗಿ ಪರಿಗಣಿಸತಕ್ಕದ್ದಲ್ಲ.
8. ಶ್ರೀ ನರಸಿಂಹಮೂರ್ತಿ.ಕೆ. ಇವರು ಸ್ವಂತ ವೇತನ ಶ್ರೇಣಿಯಲ್ಲಿ ಪೌರಾಯುಕ್ತರು, ಸಾಗರ ನಗರಸಭೆ, ಶ್ರೀ ಮಾಯಣ್ಣಗೌಡ.ಕೆ. ಮುಖ್ಯಾಧಿಕಾರಿ ಪುರಸಭೆ ಕನಕಪುರ ಮತ್ತು ಶ್ರೀ ರುದ್ರಮುನಿ ಬಿ.ಕೆ., ಮುಖ್ಯಾಧಿಕಾರಿ ಪುರಸಭೆ ಮಾಲೂರು ಇಲ್ಲಿ ಇವರುಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಇವರುಗಳನ್ನು ಮುಂದಿನ ಆದೇಶದವರೆಗೆ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳಲ್ಲಿಯೇ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ.ರಾಮಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಜುಲೈ ೨೫, ೨೦೧೨ (ಶ್ರಾವಣ ೩, ಶಕ ವರ್ಷ ೧೯೩೪) | ನಂ. ೫೦೭ |
|---|---|---|


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 78 ಸೇಸಕಿ 12, ಬೆಂಗಳೂರು ದಿನಾಂಕ: 24–07–2012**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ, ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22.11.2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 03–03–2012 ಹಾಗೂ 29–03–2012ರ ಪತ್ರಗಳಲ್ಲಿ ಶ್ರೀ ಬಿ.ಎಸ್.ಶ್ರೀಧರ್, ಸಹಾಯಕ ಇಂಜಿನಿಯರ್, ಇವರು ದಿನಾಂಕ 10.06.1993 ರಲ್ಲಿ ಕಿರಿಯ ಇಂಜಿನಿಯರ್ ಹುದ್ದೆಯ ಸೇವೆಗೆ ಸೇರಿದ್ದು ದಿನಾಂಕ 30–8–1996ರಲ್ಲಿ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ 15–11–1996 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದಾಗಿ ವರದಿ ಮಾಡಿರುತ್ತಾರೆ. ಮುಂದುವರೆದು ನಿಯಮಗಳಂತೆ ವೃಂದ ಬದಲಾವಣೆ ಹೊಂದಿದ ನೌಕರರು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ 1/3 ಭಾಗದಷ್ಟು ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತೆಯಲ್ಲಿ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಜೇಷ್ಠತೆಯನ್ನು ದಿನಾಂಕ 24–9–95 ರಿಂದ ಪರಿಗಣಿಸುವಂತೆ ಕೋರಿರುತ್ತಾರೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಕಲ್ಪಿಸಿರುವ ಅವಕಾಶದಂತೆ, ಪದವಿ ಹೊಂದಿದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆಯ ಮುಖಾಂತರ ವರ್ಗಾವಣೆಯಾಗಿ ನೇಮಕಗೊಂಡ ತರುವಾಯ ಅವರುಗಳಿಗೆ ಸಹಾಯಕ ಇಂಜಿನಿಯರ್ ಹುದ್ದೆಯಿಂದ ಮುಂದಿನ ಹುದ್ದೆಯಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಪದೋನ್ನತಿಗೆ ಪರಿಗಣಿಸುವ ಸಂದರ್ಭದಲ್ಲಿ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯಲ್ಲಿ 1/3ನೇ ಭಾಗ ಗರಿಷ್ಠ 4 ವರ್ಷಗಳ ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಸಹಾಯಕ ಇಂಜಿನಿಯರ್ ಹುದ್ದೆಯ ಜೇಷ್ಠತೆಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ ಶ್ರೀ ಬಿ.ಎಸ್.ಶ್ರೀಧರ್, ಸಹಾಯಕ ಇಂಜಿನಿಯರ್ ಇವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ 10–06–1993 ರಿಂದ 15–11–1996ರವರೆಗೆ ಸಲ್ಲಿಸಿದ 1254 ದಿನಗಳ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಕಲ್ಪಿಸಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ 24–09–1995ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3554/6546ಕ್ಕೆ ಬದಲಾಗಿ ಈ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE.GRD No. | Name of the Engineer | SC/ ST | Date of Birth | Date of En try into service | Date of Regular Appointment to the cadre | Re Marks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3458-A | 6546 | Sridhar B.S. | - | 21-Jun-1964 | 10-Jun-1993 | 15-Nov-1996<br>24-Sep-1995 * | CC |

* He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು–560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೨೫, ೨೦೧೨ (ಶ್ರಾವಣ ೩, ಶಕ ವರ್ಷ ೧೯೩೪) | ನಂ. ೫೦೮ |
|---|---|---|



## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 7 ಶಾಸನ 2011, ಬೆಂಗಳೂರು, ದಿನಾಂಕ: 25.07.2012**

ಕರ್ನಾಟಕ ಮೂಲಗೇಣಿ ಅಥವಾ ಒಳಮೂಲಗೇಣಿ ಗೇಣಿದಾರರಿಗೆ ಮಾಲೀಕತ್ವವನ್ನು ಪ್ರದಾನ ಮಾಡುವ ವಿಧೇಯಕ, 2011 ಕ್ಕೆ 2012ರ ಜುಲೈ 13ನೇ ದಿನಾಂಕದಂದು ರಾಷ್ಟ್ರಪತಿಗಳ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2012ರ ಕರ್ನಾಟಕ ಅಧಿನಿಯಮ ಸಂಖ್ಯೆ: 24 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2012 ರ ಕರ್ನಾಟಕ ಅಧಿನಿಯಮ ಸಂಖ್ಯೆ 24**

(2012ರ ಜುಲೈ ಇಪ್ಪತ್ತೈದನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಮೂಲಗೇಣಿ ಅಥವಾ ಒಳಮೂಲಗೇಣಿ ಗೇಣಿದಾರರಿಗೆ ಮಾಲೀಕತ್ವವನ್ನು ಪ್ರದಾನ ಮಾಡುವ ಅಧಿನಿಯಮ, 2011**

(2012ರ ಜುಲೈ ಹದಿಮೂರನೇ ದಿನಾಂಕದಂದು ರಾಷ್ಟ್ರಪತಿಯವರ ಅನುಮೋದನೆಯನ್ನು ಪಡೆಯಲಾಗಿದೆ)

ಮೂಲಗೇಣಿದಾರರಿಗೆ ಅಥವಾ ಒಳಮೂಲಗೇಣಿದಾರರಿಗೆ ಮಾಲೀಕತ್ವವನ್ನು ಪ್ರದಾನ ಮಾಡುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ಅಥವಾ ಪ್ರಾಸಂಗಿಕವಾದ ಇತರ ವಿಷಯಗಳಿಗಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ;

ಕೃಷಿಯೇತರ ಭೂಮಿಗಳ, ಮುಖ್ಯವಾಗಿ ಮನೆ ನಿವೇಶನಗಳ ಸಂಬಂಧದಲ್ಲಿ ಮೂಲಗೇಣಿ ಗುತ್ತಿಗೆಗಳ ಕೆಲವು ಬಗೆಗಳು ಬಹುತೇಕ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಚಾಲ್ತಿಯಲ್ಲಿರುವುದರಿಂದ;

ಅನೇಕ ಕಾರಣಗಳಿಂದಾಗಿ ಸ್ವಾಧೀನತೆಯನ್ನು ಹಿಂದಕ್ಕೆ ಪಡೆಯುವುದಕ್ಕಾಗಿನ, ಮೂಲಗಾರರ ಅಥವಾ ಮಧ್ಯವರ್ತಿಗಳ ಹಕ್ಕಿನ ಸಾಧ್ಯತೆ ದೂರವಾಗಿದ್ದು, ಅದು ಕೇವಲ ವಾರ್ಷಿಕ ಗೇಣಿಯನ್ನು ಸ್ವೀಕರಿಸುವ ಹಕ್ಕು ಆಗಿರುವುದರಿಂದ;

ಮೂಲಗೇಣಿದಾರರು ಅಥವಾ ಒಳಮೂಲಗೇಣಿದಾರರು, ನಿವಾಸದ ಅಥವಾ ವಾಣಿಜ್ಯ ಸ್ವತ್ತಿನಲ್ಲಿ, ಕಟ್ಟಡ ನಿರ್ಮಾಣಕ್ಕಾಗಿ ಮತ್ತು ಸುಧಾರಣೆಗಾಗಿ ಈಗಾಗಲೇ ಗಣನೀಯ ಮೊಬಲಗನ್ನು ಹೂಡಿದ್ದು, ಆದರೆ ಮೂಲಗಾರರಿಗೆ ಅಥವಾ ಮಧ್ಯವರ್ತಿಗಳಿಗೆ, ಕಟ್ಟಡಗಳನ್ನು ನಿರ್ಮಿಸುವುದಕ್ಕೆ ಅಥವಾ ಮೂಲಗೇಣಿದಾರರ ಅಥವಾ ಒಳಮೂಲಗೇಣಿದಾರರ ಹಿತಾಸಕ್ತಿಯನ್ನು ಪರಭಾರೆ ಮಾಡುವುದಕ್ಕೆ ಒಪ್ಪಿಗೆ ನೀಡಲು ಮನಸ್ಸಿಲ್ಲದಿರುವುದರಿಂದ ಆ ಹಿಡುವಳಿ ಸ್ವತ್ತನ್ನು ಪೂರ್ಣವಾಗಿ ಅನುಭವಿಸಲು ಸಾಧ್ಯವಾಗದಿರುವುದರಿಂದ;

ಚಾಲ್ತಿಯಲ್ಲಿರುವ ಮೂಲಗೇಣಿ ಗುತ್ತಿಗೆ ವ್ಯವಸ್ಥೆಯು ಮೂಲಗೇಣಿದಾರರಿಗಾಗಲೀ ಅಥವಾ ಒಳಮೂಲಗೇಣಿದಾರರಿಗಾಗಲೀ ಅನುಕೂಲಕರವಾಗಿಲ್ಲ ಅಥವಾ ಮೂಲಗಾರರಿಗಾಗಲಿ ಅಥವಾ ಮಧ್ಯವರ್ತಿಗಳಿಗಾಗಲಿ, ನಿಜವಾಗಿಯೂ ಪ್ರಯೋಜನಕಾರಿಯಾಗಿಲ್ಲ; ಆದರೆ ಇದಕ್ಕೆ ಪ್ರತಿಯಾಗಿ ಇವರಿಬ್ಬರ ನಡುವಿನ ಭಿನ್ನಾಭಿಪ್ರಾಯಗಳು ಸಟ್ಟಾ ವ್ಯವಹಾರಗಳಿಗೆ ಅವಕಾಶಮಾಡಿಕೊಟ್ಟಂತೆ ಆಗಿರುವುದರಿಂದ ;

ಮೂಲಗೇಣಿದಾರರಿಗೆ ಅಥವಾ ಒಳಮೂಲಗೇಣಿದಾರರಿಗೆ, ಹಿಡುವಳಿಗಳಲ್ಲಿಯ ಅವರ ಹಕ್ಕುಗಳನ್ನು ಹಾಗೂ ಹಿತಾಸಕ್ತಿಗಳನ್ನು, ಪ್ರದಾನಮಾಡುವುದಕ್ಕೆ ಸಂಬಂಧಪಟ್ಟಂತೆ, ಅವರು, ಒಂದು ನಿರ್ದಿಷ್ಟ ಮೊತ್ತವನ್ನು ಮೂಲಗಾರರಿಗೆ ಅಥವಾ ಮಧ್ಯವರ್ತಿಗಳಿಗೆ, ಸಂದಾಯ ಮಾಡಿದ ಮೇಲೆ, ಅವರಿಗೆ ಮಾಲೀಕತ್ವ ಪ್ರದಾನ ಮಾಡುವುದರಿಂದ ಹೆಚ್ಚುತ್ತಿರುವ ವ್ಯಾಜ್ಯಗಳನ್ನು ಕೊನೆಗೊಳಿಸಿದಂತಾಗುವುದು ಮತ್ತು ಸಟ್ಟಾ ವ್ಯವಹಾರದಲ್ಲಿ ತೊಡಗಿರುವ ಪಟ್ಟಭದ್ರ ಹಿತಾಸಕ್ತಿಗಳಿಗೆ ಅವಕಾಶ ಇಲ್ಲದಂತಾಗುವುದು ಮತ್ತು ಮೂಲಗಾರರಿಗೆ, ಮಧ್ಯವರ್ತಿಗಳಿಗೆ, ಮೂಲಗೇಣಿದಾರರಿಗೆ ಮತ್ತು ಒಳಮೂಲಗೇಣಿದಾರರಿಗೆ ಪ್ರಯೋಜನವಾಗುವುದರಿಂದ;

ಮತ್ತು ಇದರಲ್ಲಿ ಈ ಮೊದಲು ಹೇಳಿದ ಉದ್ದೇಶಗಳಿಗಾಗಿ, ಸಾರ್ವಜನಿಕ ಹಿತದೃಷ್ಟಿಯಿಂದ ಮೂಲಗೇಣಿದಾರರಿಗೆ ಅಥವಾ ಒಳಮೂಲಗೇಣಿದಾರರಿಗೆ ಮಾಲೀಕತ್ವ ಪ್ರದಾನ ಮಾಡುವುದಕ್ಕೆ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗೆ, ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.–** (1) ಈ ಅಧಿನಿಯಮವನ್ನು **ಕರ್ನಾಟಕ ಮೂಲಗೇಣಿ ಅಥವಾ ಒಳಮೂಲಗೇಣಿ ಗೇಣಿದಾರರಿಗೆ ಮಾಲೀಕತ್ವವನ್ನು ಪ್ರದಾನ ಮಾಡುವ ಅಧಿನಿಯಮ, 2011** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

(3) ಈ ಅಧಿನಿಯಮದ ಉಪಬಂಧಗಳು ಪ್ರಾರಂಭದಲ್ಲಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಿಗೆ ಅನ್ವಯವಾಗತಕ್ಕದ್ದು. ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಇದನ್ನು ರಾಜ್ಯದ ಇತರ ಭಾಗಗಳಿಗೆ ವಿಸ್ತರಿಸಬಹುದು.

(4) ಇದು, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಅಸ್ತಿತ್ವದಲ್ಲಿರುವ ಎಲ್ಲಾ ಮೂಲಗೇಣಿ ಒಳಮೂಲಗೇಣಿ ಗುತ್ತಿಗೆಗಳಿಗೂ ಅನ್ವಯವಾಗತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಸಕ್ಷಮ ಪ್ರಾಧಿಕಾರ" ಎಂದರೆ ಈ ಹಿಡುವಳಿಗಳು ಇರುವ ತಾಲ್ಲೂಕಿನ ತಹಶೀಲ್ದಾರ ಅಥವಾ ರಾಜ್ಯಸರ್ಕಾರವು ಅಧಿಸೂಚಿಸಬಹುದಾದಂಥ ಪ್ರದೇಶದ ಸಂಬಂಧದಲ್ಲಿ ತಹಶೀಲ್ದಾರರ ದರ್ಜೆಗೆ ಕಡಿಮೆ ಇಲ್ಲದ ಅಂಥ ಇತರ ಅಧಿಕಾರಿ;

(ಬಿ) "ಹಿಡುವಳಿ" ಎಂದರೆ, ಕಟ್ಟಡ ಸಹಿತವಾಗಿರುವ ಅಥವಾ ಕಟ್ಟಡ ಇಲ್ಲದಿರುವ ಮತ್ತು ಮೂಲಗೇಣಿ ಅಥವಾ ಒಳಮೂಲಗೇಣಿ ಗುತ್ತಿಗೆಯ ವಸ್ತು ವಿಷಯವಾಗಿರುವ ಭೂಮಿ;

(ಸಿ) "ಮಧ್ಯವರ್ತಿ" ಎಂದರೆ, ಒಬ್ಬ ಒಳಮೂಲಗೇಣಿದಾರನಿಗೆ ಹಿಡುವಳಿಯನ್ನು ಒಳಗೇಣಿಗೆ ಕೊಟ್ಟಿರುವ ಮತ್ತು ಆತನಿಂದ ಗೇಣಿಯನ್ನು ಸ್ವೀಕರಿಸಲು ಹಕ್ಕುಳ್ಳ ಆದರೆ ಅಂಥ ಹಿಡುವಳಿಯ ಸ್ವಾಧೀನತೆಯಲ್ಲಿರದ ಒಬ್ಬ ಮೂಲಗೇಣಿದಾರ ಮತ್ತು ಅಂಥ ಮೂಲಗೇಣಿದಾರನ, ವಾರಸುದಾರರು, ಉತ್ತರಾಧಿಕಾರಿಗಳು ಮತ್ತು ಕಾನೂನುಬದ್ಧ ಪ್ರತಿನಿಧಿಗಳು ಒಳಗೊಳ್ಳುತ್ತಾರೆ;

(ಡಿ) "ಮೂಲಗಾರ ಅಥವಾ ಮೂಲಿದಾರ" ಎಂದರೆ, ಗೇಣಿಯನ್ನು ಸ್ವೀಕರಿಸಲು ಹಕ್ಕುಳ್ಳ ಹಿಡುವಳಿಯ ಗೇಣಿದಾರ ಮತ್ತು ಆತನ ವಾರಸುದಾರರು, ಉತ್ತರಾಧಿಕಾರಿಗಳು ಮತ್ತು ಕಾನೂನುಬದ್ಧ ಪ್ರತಿನಿಧಿಗಳು ಒಳಗೊಳ್ಳುತ್ತಾರೆ;

(ಇ) "ಮೂಲಗೇಣಿದಾರ" ಎಂದರೆ, ಮೂಲಗೇಣಿ ಗೇಣಿಯನ್ನು ಸಂದಾಯ ಮಾಡಲು ಹೊಣೆಗಾರನಾದ ಹಿಡುವಳಿಯ ಸ್ವಾಧೀನತೆಯಲ್ಲಿರುವ, ಮೂಲಗೇಣಿ ಗುತ್ತಿಗೆ ಸಂಬಂಧದಲ್ಲಿ ಮೂಲಗೇಣಿ ಗೇಣಿದಾರ, ಆತನ ವಾರಸುದಾರರು, ಉತ್ತರಾಧಿಕಾರಿಗಳು ಮತ್ತು ಕಾನೂನುಬದ್ಧ ಪ್ರತಿನಿಧಿಗಳು, ಆದರೆ ಮಧ್ಯವರ್ತಿಯನ್ನು ಒಳಗೊಳ್ಳುವುದಿಲ್ಲ;

(ಎಫ್) "ಮೂಲಗೇಣಿ ಗುತ್ತಿಗೆ" ಎಂದರೆ ಶಾಶ್ವತ ಗುತ್ತಿಗೆ ಅಥವಾ ನಿರಂತರ ಗುತ್ತಿಗೆ ಮತ್ತು ಮೂಲಗೇಣಿದಾರನಿಂದ ಒಳಮೂಲಗೇಣಿದಾರನಿಗೆ ಕೊಡಲಾದ ಒಳಮೂಲಗೇಣಿ ಗುತ್ತಿಗೆಯು ಒಳಗೊಳ್ಳುತ್ತದೆ;

(ಜಿ) "ಮೂಲಗೇಣಿ ಬಾಡಿಗೆ" ಎಂದರೆ, ಮೂಲಗೇಣಿ ಗುತ್ತಿಗೆಯಡಿಯಲ್ಲಿ, ನಗದು ಅಥವಾ ಇನ್ನಾವುದೇ ರೂಪದ ಅಥವಾ ಸೇವೆಯನ್ನು ಸಲ್ಲಿಸುವ ಅಥವಾ ಈ ಎಲ್ಲಾ ವಿಧಗಳ ಪೈಕಿ ಒಂದು ಅಥವಾ ಹೆಚ್ಚಿನ ವಿಧಗಳಡಿಯಲ್ಲಿ ನಿಗದಿಪಡಿಸಿದ ಬಾಡಿಗೆ;

(ಹೆಚ್) "ಒಳಮೂಲಗೇಣಿದಾರ" ಎಂದರೆ, ಮೂಲಗೇಣಿದಾರನಿಂದ ಒಳಮೂಲಗೇಣಿಯ ಮೇಲೆ ಹಿಡುವಳಿಯನ್ನು ತೆಗೆದುಕೊಂಡಿರುವ ಹಾಗೂ ಅಂಥ ಹಿಡುವಳಿಯ ಸ್ವಾಧೀನತೆಯಲ್ಲಿರುವ ಮತ್ತು ಅಂಥ ಮೂಲಗೇಣಿದಾರನಿಗೆ ಅಥವಾ ಸಂದರ್ಭಾನುದಾರ ಮೂಲಿದಾರನಿಗೆ ಗೇಣಿಯನ್ನು ಸಂದಾಯ ಮಾಡುವುದಕ್ಕೆ ಬದ್ಧನಾದ ಉಪ–ಮೂಲಗೇಣಿ ಗೇಣಿದಾರ;

(ಐ) "ವಾರ್ಡ್" ಎಂದರೆ, ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) 2ನೇ ಪ್ರಕರಣದಲ್ಲಿ ಪರಿಭಾಷಿಸಲಾದಂತೆ ಒಂದು ವಾರ್ಡ್.

**3. ಮೂಲಗೇಣಿದಾರನಿಗೆ ಅಥವಾ ಒಳಮೂಲಗೇಣಿದಾರನಿಗೆ ಮಾಲೀಕತ್ವದ ಹಕ್ಕನ್ನು ಪ್ರದಾನ ಮಾಡುವುದು.–** ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಹಿಡುವಳಿಯ ಸ್ವಾಧೀನದಲ್ಲಿರುವ ಹಾಗೂ ಅನುಭವಿಸುತ್ತಿರುವಂಥ ಪ್ರತಿಯೊಬ್ಬ ಮೂಲಗೇಣಿದಾರ ಅಥವಾ ಒಳಮೂಲಗೇಣಿದಾರನು, ಆತನಿಗೆ ಹಿಡುವಳಿಯ ಮಾಲೀಕತ್ವವನ್ನು ಪ್ರದಾನ ಮಾಡಲ್ಪಡುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಮುಂದಿನ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದ ಮೇಲೆ ಹಾಗೂ ಆತನಿಗೆ ಅಂಥ ಮಾಲೀಕತ್ವದ ಹಕ್ಕನ್ನು ಪ್ರದಾನ ಮಾಡಿದ ಮೇಲೆ, ಅಂಥ ಹಿಡುವಳಿಯಲ್ಲಿನ ಮೂಲಗಾರರಿಗೆ ಅಥವಾ ಸಂದರ್ಭಾನುಸಾರವಾಗಿ ಮಧ್ಯವರ್ತಿಗೆ ಅವನ ಎಲ್ಲಾ ಹಕ್ಕುಗಳು ಹಾಗೂ ಹಿತಾಸಕ್ತಿಗಳು ಕೊನೆಗೊಳ್ಳತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಇರುವುದು ಯಾವುದೂ, ಅಂಥ ಹಿಡುವಳಿಯ ಸಂಬಂಧದಲ್ಲಿ ಸೃಜಿಸಲಾದ ಯಾವುದೇ ಅಡಮಾನ ಅಥವಾ ಋಣಭಾರಕ್ಕೆ ಬಾಧಕವಾಗತಕ್ಕದ್ದಲ್ಲ.

**4. ಮಾಲೀಕತ್ವವನ್ನು ಪ್ರದಾನ ಮಾಡುವುದಕ್ಕಾಗಿನ ಅರ್ಹತೆಗೆ ಸಂಬಂಧಿಸಿದ ಷರತ್ತುಗಳು.–** ಮೂಲಗೇಣಿದಾರನು ಅಥವಾ ಒಳಮೂಲಗೇಣಿದಾರನು, 7ನೇ ಪ್ರಕರಣದಡಿಯಲ್ಲಿ ಸಕ್ಷಮ ಪ್ರಾಧಿಕಾರವು ನಿಯಮಿಸಬಹುದಾದಂಥ ಮಾರ್ಗಸೂಚಿಕೆಗಳನ್ನು ಪರಿಗಣಿಸಿ ನಿರ್ಧರಿಸಬಹುದಾದಂತೆ, ಮೊಬಲಗನ್ನು, ಮೂಲಗಾರನಿಗೆ ಅಥವಾ ಮಧ್ಯವರ್ತಿಗೆ ಸಂದಾಯ ಮಾಡಿದರೆ ಈ ಅಧಿನಿಯಮದ ಅಡಿಯಲ್ಲಿ ಮಾಲೀಕತ್ವದ ಹಕ್ಕನ್ನು ಪ್ರದಾನ ಮಾಡಲ್ಪಡುವುದಕ್ಕೆ ಅರ್ಹನಾಗಿರತಕ್ಕದ್ದು:

ಪರಂತು, ಮೂಲಗೇಣಿದಾರ ಅಥವಾ ಒಳಮೂಲಗೇಣಿದಾರನು ಯಾವುದೇ ಪ್ರಿಮಿಯಮ್ ಸಂದಾಯ ಮಾಡಿದರೆ, ಈ ಪ್ರಕರಣದಡಿಯಲ್ಲಿ ಸಂದಾಯ ಮಾಡಬಹುದಾದ ಮೊಬಲಗಿನಲ್ಲಿ ಕಡಿತಗೊಳಿಸತಕ್ಕದ್ದಲ್ಲ.

**5. ಮೂಲಗೇಣಿದಾರರು ಅಥವಾ ಒಳಮೂಲಗೇಣಿದಾರರು ಅರ್ಜಿಗಳನ್ನು ಸಲ್ಲಿಸುವುದು.–** (1) 3ನೇ ಪ್ರಕರಣದಡಿಯಲ್ಲಿ ಮಾಲೀಕತ್ವದ ಹಕ್ಕು ಪ್ರದಾನ ಮಾಡಲ್ಪಡುವುದಕ್ಕೆ ಹಕ್ಕುಳ್ಳ ಮತ್ತು ತಾನು ಹೊಂದಿರುವ ಹಿಡುವಳಿ ಮೇಲಿನ ಮಾಲೀಕತ್ವದ ಹಕ್ಕನ್ನು ಸ್ವಾಧೀನಪಡಿಸಿಕೊಳ್ಳಲು ಇಚ್ಛಿಸುವ ಪ್ರತಿಯೊಬ್ಬ ಮೂಲಗೇಣಿದಾರ ಅಥವಾ ಒಳಮೂಲಗೇಣಿದಾರನು, ಅಂಥ ದಸ್ತಾವೇಜುಗಳೊಂದಿಗೆ, ಅಂಥ ವಿವರಗಳನ್ನು ಒಳಗೊಂಡ ಮತ್ತು ನಿಯಮಿಸಬಹುದಾದಂಥ ಸಮಯದೊಳಗೆ ಅಂಥ ನಮೂನೆಯಲ್ಲಿ ಅರ್ಜಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(2) ಬೇರೆ ಬೇರೆ ಗ್ರಾಮಗಳಲ್ಲಿ ಅಥವಾ ವಾರ್ಡ್‌ಗಳಲ್ಲಿ ಇರುವ ಪ್ರತಿಯೊಂದು ಹಿಡುವಳಿಯ ಸಂಬಂಧದಲ್ಲಿ ಮತ್ತು ಬೇರೆ ಬೇರೆ ಮೂಲಗಾರರು ಅಥವಾ ಮಧ್ಯವರ್ತಿಗಳ ಅಥವಾ ಒಳಮೂಲಗೇಣಿದಾರರ ಸಂಬಂಧದಲ್ಲಿ (1)ನೇ ಉಪ ಪ್ರಕರಣದಡಿಯಲ್ಲಿ ಪ್ರತ್ಯೇಕ ಅರ್ಜಿಯನ್ನು ಸಲ್ಲಿಸತಕ್ಕದ್ದು.

(3) ಮೂಲಗೇಣಿದಾರನ ಅಥವಾ ಒಳಮೂಲಗೇಣಿದಾರನ ತಿಳಿವಳಿಕೆಯಲ್ಲಿ ಸಂಬಂಧಪಟ್ಟ ಹಿಡುವಳಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಮೂಲಗಾರರ ಅಥವಾ ಮಧ್ಯವರ್ತಿಗಾರರ ಮತ್ತು ಎಲ್ಲಾ ಇತರ ವ್ಯಕ್ತಿಗಳ ಹೆಸರುಗಳನ್ನು ಅವರ ಪೂರ್ಣ ವಿಳಾಸ ಮತ್ತು ಸರಿಯಾದ ಅಂಚೆ ವಿಳಾಸದೊಂದಿಗೆ, ಅರ್ಜಿಯಲ್ಲಿ ಪಕ್ಷಕಾರರನ್ನಾಗಿ ಸೇರಿಸತಕ್ಕದ್ದು.

(4) ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ ಅಡಿಯಲ್ಲಿ (1962ರ ಕರ್ನಾಟಕ ಅಧಿನಿಯಮ 10) ಅಧಿಭೋಗದ ಹಕ್ಕನ್ನು ಪ್ರದಾನ ಮಾಡುವಂತೆ ಕೋರಿ, ಸಲ್ಲಿಸಲಾಗಿರುವ ಯಾವೊಬ್ಬ ಮೂಲಗೇಣಿದಾರ ಅಥವಾ ಒಳಮೂಲಗೇಣಿದಾರನ ಅರ್ಜಿಯನ್ನು, ಪ್ರಶ್ನೆಯಲ್ಲಿರುವ ಭೂಮಿಯು, ಕೃಷಿ ಭೂಮಿಯಲ್ಲವೆಂಬ ಕಾರಣದಿಂದ ಭೂ ನ್ಯಾಯಾಧಿಕರಣವು ತಿರಸ್ಕರಿಸಿದ್ದರೆ ಆತನು ಕೂಡಾ ಈ ಪ್ರಕರಣದಡಿಯಲ್ಲಿ ಅರ್ಜಿಯನ್ನು ಸಲ್ಲಿಸಲು ಅರ್ಹನಾಗಿರತಕ್ಕದ್ದು.

**6. ಸಕ್ಷಮ ಪ್ರಾಧಿಕಾರದ ಮುಂದೆ ವಿಚಾರಣೆ.–** (1) 5ನೇ ಪ್ರಕರಣದಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಸಕ್ಷಮ ಪ್ರಾಧಿಕಾರವು, ಅರ್ಜಿಯಲ್ಲಿ ನಮೂದಿಸಿದ ಎಲ್ಲಾ ವ್ಯಕ್ತಿಗಳಿಗೆ ಮತ್ತು ಹಿಡುವಳಿಯಲ್ಲಿ ಹಿತಾಸಕ್ತಿ ಹೊಂದಿರುವವರೆಂದು ಕಂಡುಬರಬಹುದಾದಂಥ ಇತರ ವ್ಯಕ್ತಿಗಳಿಗೆ, ಅವರ ಹಾಜರಾತಿಗಾಗಿ ನಿಗದಿಪಡಿಸಿದ ದಿನಾಂಕ ಮತ್ತು ಸಮಯವನ್ನು ತಿಳಿಸಿ ಮತ್ತು ಆಕ್ಷೇಪಣೆಗಳು, ಯಾವುದಾದರೂ ಇದ್ದಲ್ಲಿ, ಅವುಗಳನ್ನು ದಾಖಲು ಮಾಡುವಂತೆ ಅವರನ್ನು ಕೋರಿ ಮತ್ತು ಅವರ ಆಕ್ಷೇಪಣೆಗಳ ಸಮರ್ಥನೆಯಲ್ಲಿಯ ಸಂಬಂಧಪಟ್ಟ ಸಾಕ್ಷ್ಯವನ್ನು ಒದಗಿಸುವಂತೆ ಪ್ರತಿಯೊಬ್ಬರಿಗೆ ನೋಟೀಸನ್ನು ನೀಡತಕ್ಕದ್ದು.

(2) ನೋಟೀಸುಗಳ ನಮೂನೆ, ನೋಟೀಸುಗಳನ್ನು ಜಾರಿ ಮಾಡುವ ವಿಧಾನ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲಾ ಇತರ ವಿಷಯಗಳು, ನಿಯಮಿಸಬಹುದಾದಂಥ ರೀತಿಯಲ್ಲಿ ಇರತಕ್ಕದ್ದು. ಸಕ್ಷಮ ಪ್ರಾಧಿಕಾರವು, ಸಿಂಧುವಾದ ಮತ್ತು ಸಾಕಷ್ಟು ಕಾರಣಗಳಿಗಾಗಿ, ಅರ್ಜಿಯನ್ನು ತಿದ್ದುಪಡಿ ಮಾಡುವುದಕ್ಕೆ ಅರ್ಜಿದಾರನಿಗೆ ಅನುಮತಿ ನೀಡಬಹುದು.

(3) ಹಾಜರಾತಿಗಾಗಿ ನಿಗದಿ ಮಾಡಿದ ದಿನಾಂಕದಂದು, ಸೂಕ್ತ ನೋಟೀಸನ್ನು ಜಾರಿಗೊಳಿಸಿದ ತರುವಾಯವೂ, ಪ್ರತಿವಾದಿಯು, ಸಕ್ಷಮ ಪ್ರಾಧಿಕಾರದ ಮುಂದೆ ಹಾಜರಾಗಲು ತಪ್ಪಿದಲ್ಲಿ ಅಥವಾ ಪ್ರತಿವಾದಿಯು, ಆಕ್ಷೇಪಣೆಗಳು, ಯಾವುದಾದರೂ ಇದ್ದಲ್ಲಿ, ಅವುಗಳನ್ನು ದಾಖಲು ಮಾಡಲು

ತಪ್ಪಿದಲ್ಲಿ, ಸಕ್ಷಮ ಪ್ರಾಧಿಕಾರವು, ತಾನು ಸೂಕ್ತವೆಂದು ಭಾವಿಸುವಂಥ ಸತ್ಯಾಪನೆ ಮಾಡಿದ ತರುವಾಯ, ಮಾಲೀಕತ್ವವನ್ನು ಪ್ರದಾನ ಮಾಡುವುದಕ್ಕಾಗಲೀ ಅಥವಾ ಅರ್ಜಿಯನ್ನು ತಿರಸ್ಕರಿಸುವುದಕ್ಕಾಗಲೀ ಆದೇಶವನ್ನು ಹೊರಡಿಸಬಹುದು.

(4) ಅರ್ಜಿದಾರನ ಕ್ಲೇಮಿನ ಸಿಂಧುತ್ವವನ್ನು ವಿವಾದಿಸುವ ಅಥವಾ ವಿರೋಧಿಸುವ ಕ್ಲೇಮನ್ನು ಮುಂದಿಡುವ ಒಂದು ಆಕ್ಷೇಪಣೆಯನ್ನು ದಾಖಲು ಮಾಡಿದ್ದಲ್ಲಿ, ಸಕ್ಷಮ ಪ್ರಾಧಿಕಾರವು, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಮಾಲೀಕತ್ವವನ್ನು ಪ್ರದಾನಮಾಡಿ ಅಥವಾ ಅರ್ಜಿಯನ್ನು ತಿರಸ್ಕರಿಸಿ ಆದೇಶವನ್ನು ಹೊರಡಿಸತಕ್ಕದ್ದು.

(5) ಸಕ್ಷಮ ಪ್ರಾಧಿಕಾರವು, ಯಾವೊಬ್ಬ ಪಕ್ಷಕಾರರ ಅರ್ಜಿಯ ಮೇಲೆ, ಲಿಖಿತದಲ್ಲಿ ಕಾರಣಗಳನ್ನು ಅಭಿಲೇಖಿಸಿ ತಾನು ಹೊರಡಿಸಿದ ಯಾವುದೇ ಆದೇಶದಲ್ಲಿನ ಯಾವುದೇ ಲಿಪಿಕ ಅಥವಾ ಗಣಿತದ ತಪ್ಪುಗಳನ್ನು ಸರಿಪಡಿಸಬಹುದು.

(6) ಸಕ್ಷಮ ಪ್ರಾಧಿಕಾರವು, ತಾನಾಗಿಯೇ ಅಥವಾ ಯಾವೊಬ್ಬ ಪಕ್ಷಕಾರರ ಅರ್ಜಿಯ ಮೇಲೆ, ಲಿಖಿತದಲ್ಲಿ ಕಾರಣಗಳನ್ನು ಅಭಿಲೇಖಿಸಿ ವಾಸ್ತವಿಕ ಅಳತೆ ಮಾಡಿಸಿದ ತರುವಾಯ ಮತ್ತು ಸಂಬಂಧಪಟ್ಟ ಪಕ್ಷಕಾರರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ಹಿಡುವಳಿಯ ವಿಸ್ತೀರ್ಣವನ್ನು ಅಥವಾ ತಾನು ಹೊರಡಿಸಿದ ಯಾವುದೇ ಆದೇಶವನ್ನು ಸರಿಪಡಿಸಬಹುದು.

**7. ಮೂಲಗಾರ ಅಥವಾ ಮಧ್ಯವರ್ತಿಗೆ ಸಂದಾಯವಾಗಬೇಕಾದ ಮೊಬಲಗಿನ ನಿರ್ಧಾರ.–** (1) 6ನೇ ಪ್ರಕರಣದಡಿಯಲ್ಲಿ ಆದೇಶವನ್ನು ಹೊರಡಿಸಿದ ತರುವಾಯ, ಸಕ್ಷಮ ಪ್ರಾಧಿಕಾರವು, 4ನೇ ಪ್ರಕರಣದ ಅಡಿಯಲ್ಲಿ ನೀಡಿದ ಮಾರ್ಗಸೂಚಿಗಳನ್ನು ಗಮನದಲ್ಲಿಟ್ಟುಕೊಂಡು, ಹಿಡುವಳಿಯಲ್ಲಿ ಮೂಲಗಾರ ಮತ್ತು ಮಧ್ಯವರ್ತಿಯ ಹಕ್ಕುಗಳು ಕೊನೆಗೊಳ್ಳುವುದಕ್ಕೆ ಮತ್ತು ಹಿತಾಸಕ್ತಿಯ ಸಂಬಂಧದಲ್ಲಿ, ಮೂಲಗಾರ ಅಥವಾ ಮಧ್ಯವರ್ತಿಗೆ ಸಂದಾಯವಾಗಬೇಕಾದ, ಮೊಬಲಗು, ಯಾವುದಾದರೂ ಇದ್ದಲ್ಲಿ, ಅದನ್ನು ನಿರ್ಧರಿಸತಕ್ಕದ್ದು ಮತ್ತು ಹಿಡುವಳಿಯಲ್ಲಿ, ಅನುಕ್ರಮವಾಗಿ ಅವರ ಹಕ್ಕುಗಳು ಮತ್ತು ಹಿತಾಸಕ್ತಿಯ ಮೌಲ್ಯಕ್ಕನುಸಾರವಾಗಿ, ಹಕ್ಕುಳ್ಳ ವ್ಯಕ್ತಿಗಳಲ್ಲಿ, ಹಾಗೆ ನಿರ್ಧರಿಸಲಾಗಿದ್ದ ಮೊಬಲಗನ್ನು ಹಂಚಿಕೆಮಾಡುವುದನ್ನು ತೋರಿಸುವ ತ:ಖ್ತೆಯನ್ನು, ನಿಯಮಿಸಬಹುದಾದಂಥ ಇತರ ವಿವರಗಳು ಒಳಗೊಂಡಂತೆ ಸಿದ್ಧಪಡಿಸತಕ್ಕದ್ದು.

(2) (1)ನೇ ಉಪಪ್ರಕರಣದಡಿಯಲ್ಲಿ ಸಂದಾಯವಾಗಬೇಕಾದ ಮೊತ್ತವು, ದಾಖಲೆಗಳಲ್ಲಿ ಕಂಡುಬರುವಂತೆ ಗುತ್ತಿಗೆ–ಗೇಣಿ ಮೊತ್ತದ 500ರಷ್ಟು ಆಗಿರತಕ್ಕದ್ದು. ಆದಾಗ್ಯೂ, ಮೂಲಗೇಣಿ ಗುತ್ತಿಗೆಯು, ಸ್ವತ್ತಿನ ಪರಭಾರೆಗಾಗಿ ಮೂಲಗಾರನ ಅನುಮತಿಯನ್ನು ಅಗತ್ಯಪಡಿಸುವ ಷರತ್ತು ಪೂರ್ವಕವಾಗಿದ್ದಲ್ಲಿ, ಸಂದಾಯವಾಗತಕ್ಕ ಮೊತ್ತವನ್ನು, ಗುತ್ತಿಗೆಗೇಣಿಯ 1000 ರಷ್ಟರಂತೆ ಲೆಕ್ಕ ಮಾಡತಕ್ಕದ್ದು.

**8. ಮಾಲೀಕತ್ವದ ಪ್ರಮಾಣಪತ್ರದ ನೀಡಿಕೆ.–** (1) ಸಕ್ಷಮ ಪ್ರಾಧಿಕಾರವು, ಯಾರಿಗೆ ಹಿಡುವಳಿಯ ಮಾಲೀಕತ್ವವನ್ನು ಪ್ರದಾನ ಮಾಡಿದೆಯೋ ಆ ಮೂಲ ಗೇಣಿದಾರನು ಅಥವಾ ಒಳಮೂಲಗೇಣಿದಾರನು, 7ನೇ ಪ್ರಕರಣದಡಿಯಲ್ಲಿ ಮೊಬಲಗನ್ನು ನಿರ್ಧರಿಸುವ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಸಕ್ಷಮ ಪ್ರಾಧಿಕಾರದ ಮುಂದೆ ಮೊಬಲಗನ್ನು ಠೇವಣಿ ಇಡತಕ್ಕದ್ದು.

(2) ಸಕ್ಷಮ ಪ್ರಾಧಿಕಾರವು, ಮೂಲಗೇಣಿದಾರನು ಅಥವಾ ಒಳಮೂಲಗೇಣಿದಾರನು ಮೊಬಲಗನ್ನು ಠೇವಣಿ ಇಟ್ಟ ತರುವಾಯ, ಅಪೀಲು ವಿಚಾರಣಾ ಪ್ರಾಧಿಕಾರದ ತೀರ್ಮಾನವು ಯಾವುದಾದರೂ ಇದ್ದರೆ, ಅದಕ್ಕೊಳಪಟ್ಟು ಮೂಲಗೇಣಿದಾರನಿಗೆ ಅಥವಾ ಸಂದರ್ಭಾನುಸಾರ ಒಳಮೂಲಗೇಣಿದಾರನಿಗೆ, ಮಾಲೀಕತ್ವವನ್ನು ಪ್ರದಾನ ಮಾಡಲಾಗಿದೆ ಎಂಬ ಪ್ರಮಾಣಪತ್ರವನ್ನು ನೀಡತಕ್ಕದ್ದು ಮತ್ತು ಅಂಥ ಪ್ರಮಾಣ ಪತ್ರವು ಅಂಥ ಮಾಲೀಕತ್ವವನ್ನು ಪ್ರದಾನ ಮಾಡಿದ ಬಗ್ಗೆ ನಿರ್ಣಾಯಕ ಸಾಕ್ಷ್ಯವಾಗಿರತಕ್ಕದ್ದು.

(3) ಸಕ್ಷಮ ಪ್ರಾಧಿಕಾರವು, (2)ನೇ ಉಪ ಪ್ರಕರಣದಡಿಯಲ್ಲಿ ಹೊರಡಿಸಿದ ಪ್ರಮಾಣ ಪತ್ರದ ಪ್ರತಿಯನ್ನು ಸಂಬಂಧಪಟ್ಟ ಸಬ್‌ರಿಜಿಸ್ಟ್ರಾರ್‌ರಿಗೆ ಕಳುಹಿಸತಕ್ಕದ್ದು, ಆತನು, ಅದನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ನೋಂದಣಿ ಮಾಡತಕ್ಕದ್ದು.

**9. ಅಪೀಲು.–** (1) 6ನೇ ಪ್ರಕರಣದಡಿಯಲ್ಲಿಯ ಸಕ್ಷಮ ಪ್ರಾಧಿಕಾರದ ಆದೇಶದಿಂದ ಭಾದಿತನಾದ ಯಾವೊಬ್ಬ ವ್ಯಕ್ತಿಯು, ಸಕ್ಷಮ ಪ್ರಾಧಿಕಾರದ ಆದೇಶದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಸಂಬಂಧಪಟ್ಟ ಕಂದಾಯ ಉಪ ವಿಭಾಗದ ಸಹಾಯಕ ಆಯುಕ್ತನಿಗೆ ಅಪೀಲು ಸಲ್ಲಿಸಬಹುದು.

(2) ಸಹಾಯಕ ಆಯುಕ್ತನು, ಅಪೀಲುದಾರ ಮತ್ತು ಪ್ರತಿವಾದಿಗಳು, ಇವರಿಬ್ಬರಿಗೂ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ಅಂಥ ಅಪೀಲಿನ ಮೇಲೆ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಅದು ಅಂತಿಮವಾಗಿರತಕ್ಕದ್ದು. ಸಹಾಯಕ ಆಯುಕ್ತನು ಹೊರಡಿಸಿದ ಒಂದು ಪ್ರತಿಯನ್ನು ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ಕಳುಹಿಸಿಕೊಡತಕ್ಕದ್ದು.

**10. ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** (1) ಈ ಅಧಿನಿಯಮದಲ್ಲಿ ಉಪಬಂಧಿಸಿದುದನ್ನು ಹೊರತುಪಡಿಸಿ, ಈ ಅಧಿನಿಯಮದ ಮೂಲಕ ಅಥವಾ ಸಕ್ಷಮ ಪ್ರಾಧಿಕಾರ ಅಥವಾ ಸಂದರ್ಭಾನುಸಾರ ಸಹಾಯಕ ಆಯುಕ್ತನು ಇತ್ಯರ್ಥಪಡಿಸಬೇಕೆಂದು, ತೀರ್ಮಾನಿಸಬೇಕೆಂದು ಅಥವಾ ವ್ಯವಹರಿಸಬೇಕೆಂದು ಅಗತ್ಯಪಡಿಸುವ ಯಾವುದೇ ಪ್ರಶ್ನೆಯನ್ನು, ಇತ್ಯರ್ಥಪಡಿಸುವ, ತೀರ್ಮಾನಿಸುವ ಅಥವಾ ವ್ಯವಹರಿಸುವ ಅಧಿಕಾರ ವ್ಯಾಪ್ತಿಯು ಯಾವುದೇ ಸಿವಿಲ್ ನ್ಯಾಯಾಲಯಕ್ಕೆ ಇರತಕ್ಕದ್ದಲ್ಲ.

(2) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಬಾಕಿಯಿರುವ ವ್ಯಾಜ್ಯಗಳು ಸಕ್ಷಮ ಪ್ರಾಧಿಕಾರಕ್ಕೆ ವರ್ಗಾವಣೆಯಾಗತಕ್ಕದ್ದು ಮತ್ತು 5ನೇ ಪ್ರಕರಣದಡಿಯಲ್ಲಿ ಆದರ ಮುಂದೆ ದಾಖಲಿಸಿದ ಅರ್ಜಿಯಾಗಿದ್ದರೆ ಹೇಗೋ ಹಾಗೆ ಅವುಗಳನ್ನು ನಿರ್ಧರಿಸತಕ್ಕದ್ದು.

**11. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿರದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಬಹುದು.

**12. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಯಾವುದೇ ಅಥವಾ ಎಲ್ಲಾ ಉದ್ದೇಶಗಳನ್ನು ಕಾರ್ಯಗತಗೊಳಿಸುವ ಉದ್ದೇಶಗಳಿಗಾಗಿ, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ರಾಜ್ಯ ವಿಧಾನಮಂಡಲದ ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ, ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಒಪ್ಪಿದರೆ ತದನಂತರ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಈ ನಿಯಮದ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ.

# ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಗುರುವಾರ, ಜುಲೈ ೨೬, ೨೦೧೨ (ಶ್ರಾವಣ ೪, ಶಕ ವರ್ಷ ೧೯೩೪) | ನಂ. ೫೦೯ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 06 ಚುರಾಸ 2012, ಬೆಂಗಳೂರು, ದಿನಾಂಕ: 26ನೇ ಜುಲೈ, 2012**

ಕರ್ನಾಟಕ ರಾಜ್ಯಪತ್ರದ ವಿಶೇಷ ಪತ್ರಿಕೆ ಭಾಗ–IV, ಸಂಖ್ಯೆ: 505, ದಿನಾಂಕ: 24ನೇ ಜುಲೈ 2012ರಲ್ಲಿ ಪ್ರಕಟಿಸಿರುವ ಭಾರತದ ಉಪ ರಾಷ್ಟ್ರಪತಿ ಪದಕ್ಕೆ ಸ್ಪರ್ಧಿಸಿರುವ ಅಭ್ಯರ್ಥಿಗಳ ಹೆಸರುಗಳನ್ನೊಳಗೊಂಡ ನಮೂನೆ 5ರ ಪಟ್ಟಿಗೆ ತಂದಿರುವ **ತಿದ್ದುಪಡಿಯನ್ನು (Errata)** ಸಾರ್ವಜನಿಕರ ತಿಳುವಳಿಕೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಶಾಮಯ್ಯ**
ಜಂಟಿ ಮುಖ್ಯ ಚುನಾವಣಾಧಿಕಾರಿ ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಿ.ಆ.ಸು.ಇ. (ಚುನಾವಣೆಗಳು).

**ಚುನಾವಣಾಧಿಕಾರಿಗಳ ಕಾರ್ಯಾಲಯ,**

**ಭಾರತದ ಉಪ ರಾಷ್ಟ್ರಪತಿ ಚುನಾವಣೆ, 2012**

**ಸ್ಪರ್ಧಿಸಿರುವ ಅಭ್ಯರ್ಥಿಗಳ ಪಟ್ಟಿಗೆ ತಿದ್ದುಪಡಿ (Errata)**

ಕರ್ನಾಟಕ ರಾಜ್ಯಪತ್ರದ ವಿಶೇಷ ಪತ್ರಿಕೆ ಭಾಗ–IV, ಸಂಖ್ಯೆ: 505, ದಿನಾಂಕ: 24ನೇ ಜುಲೈ 2012ರಲ್ಲಿ ಪ್ರಕಟಿಸಿರುವ ಭಾರತದ ಉಪ ರಾಷ್ಟ್ರಪತಿ ಚುನಾವಣೆ, 2012ರ ಸಂಬಂಧ ನಮೂನೆ 5 ರಲ್ಲಿ ಪ್ರಕಟಿಸಿರುವ ಸ್ಪರ್ಧಿಸಿರುವ ಅಭ್ಯರ್ಥಿಗಳ ಪಟ್ಟಿಯಲ್ಲಿನ **"ಅಭ್ಯರ್ಥಿಯ ಹೆಸರು"** ಅಂಕಣದಲ್ಲಿ ಕ್ರಮ ಸಂಖ್ಯೆ: 1 ಮತ್ತು 2ರಲ್ಲಿ ಪ್ರಸ್ತಾಪಿಸಿರುವ ಇಬ್ಬರು ಅಭ್ಯರ್ಥಿಗಳ ಹೆಸರುಗಳ ಮುಂದೆ ನಮೂದಿಸಿರುವ **"ಶ್ರೀ"** ಪದವನ್ನು ಕೈಬಿಡತಕ್ಕದ್ದು.

**ವಿ.ಆರ್. ರಮೇಶ್**
ಸಹಾಯಕ ಚುನಾವಣಾಧಿಕಾರಿ,
ಭಾರತದ ಉಪ ರಾಷ್ಟ್ರಪತಿ ಚುನಾವಣೆ, 2012
ಮತ್ತು ಜಂಟಿ ಕಾರ್ಯದರ್ಶಿ, ಲೋಕಸಭಾ ಸಚಿವಾಲಯ.

ಸ್ಥಳ: ನವದೆಹಲಿ
ದಿನಾಂಕ: 24ನೇ ಜುಲೈ, 2012

## PERSONNEL AND ADMINISTRATIVE REFORMS SECRETARIAT

### NOTIFICATION

### NO. DPAR 06 CHURASA 2012, Bangalore, DATED 26TH JULY, 2012

The errata to the list of contesting candidates in Form 5, dated the 23rd July, 2012, relating to the election to the office of Vice-President of India, published in Karnataka Extra-Ordinary Gazette No. 505, Part-IV, dated: 24th July, 2012 is hereby published for information of the General Public.

By Order and in the Name of the Governor of Karnataka,

**T. SHAMAIAH**
Joint Chief Electoral Officer &
Ex-Officio Joint Secretary to Govt.,
D.P.A.R. (Elections)

## OFFICE OF THE RETURNING OFFICER

### VICE PRESIDENTIAL ELECTION, 2012

### ERRATA TO LIST OF CONTESTING CANDIDATES

In the list of contesting candidates published in Form 5, dated the 23rd July, 2012, relating to the election to the office of Vice-President of India, vide Karnataka Extra-Ordinary Gazette No. 505, Part-IV, dated: 24th July, 2012, **omit** the word **"Shri"** appearing in the column **"Name of Candidate"** against the names at Sl. No. 1 and 2.

**V.R. RAMESH**
Assistant Returning Officer
for the Vice-Presidential Election, 2012 &
Joint Secretary, Lok Sabha Secretariat.

Place: New Delhi
Date: 24th July, 2012

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೨೭, ೨೦೧೨ (ಶ್ರಾವಣ ೫, ಶಕ ವರ್ಷ ೧೯೩೪) | ನಂ. ೫೧೧ |
|---|---|---|

## KARNATAKA LEGISLATIVE ASSEMBLY SECRETARIAT

**NOTIFICATION**

**No. KLA/LGA/22/Bill/2012, Bangalore, Dated: 27.7.2012**

The following Bill was introduced in Legislative Assembly on 27.7.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾಲ್ಕನೇ ಅಧಿವೇಶನ**

## ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 22)**

2012–13ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2012–13ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ:

ಇದು ಭಾರತಗಣರಾಜ್ಯದಅರವತ್ತಮೂರನೇ ವರ್ಷದಲ್ಲಿಕರ್ನಾಟಕರಾಜ್ಯವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ:–

**1. ಸಂಕ್ಷಿಪ್ತ ಹೆಸರು:** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2012–13**ನೇ ಹಣಕಾಸು ವರ್ಷಕ್ಕಾಗಿ **10770501.38** ಲಕ್ಷ ರೂಪಾಯಿಗಳ ನೀಡಿಕೆ: ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2012–13ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ (2012ರ ಕರ್ನಾಟಕ ಅಧಿನಿಯಮ ಸಂಖ್ಯೆ:16ರಲ್ಲಿ ಸಂದಾಯ ಮಾಡಲು ಅಧಿಕಾರ ನೀಡಲಾದ 3589808.11 ಲಕ್ಷ ರೂಪಾಯಿಗಳನ್ನು ಒಳಗೊಂಡಂತೆ) ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ಒಂದು ಲಕ್ಷದ ಏಳು ಸಾವಿರದ ಏಳು ನೂರಾ ಐದು ಕೋಟಿ ಒಂದು ಲಕ್ಷದ ಮೂವತ್ತೆಂಟು ಸಾವಿರ ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ** ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

**3. ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

**(₹. ಲಕ್ಷಗಳಲ್ಲಿ)**

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 3,97,149.73 | 26.89 | 3,97,176.62 |
| | | ಬಂಡವಾಳ | 12,425.00 | ... | 12,425.00 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 1,07,701.16 | 10.00 | 1,07,711.16 |
| | | ಬಂಡವಾಳ | 16,330.00 | ... | 16,330.00 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | |
| **1** | **2** | | **3** | **4** | **5** |
| 03 | ಆರ್ಥಿಕ | ರಾಜಸ್ವ | 11,72,557.72 | 34.96 | 11,72,592.68 |
| | | ಬಂಡವಾಳ | 447.00 | ... | 447.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 48,603.47 | 13,785.75 | 62,389.22 |
| | | ಬಂಡವಾಳ | 900.00 | ... | 900.00 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 3,35,513.13 | ... | 3,35,513.13 |
| | | ಬಂಡವಾಳ | 29,891.81 | ... | 29,891.81 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ರಾಜಸ್ವ | 1,855.00 | ... | 1,855.00 |
| | | ಬಂಡವಾಳ | 66,900.00 | ... | 66,900.00 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 4,73,206.75 | 1,800.00 | 4,75,006.75 |
| | | ಬಂಡವಾಳ | 2,19,161.00 | ... | 2,19,161.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 79,973.66 | 40,015.18 | 1,19,988.84 |
| | | ಬಂಡವಾಳ | 2,060.00 | ... | 2,060.00 |
| 09 | ಸಹಕಾರ | ರಾಜಸ್ವ | 56,491.79 | ... | 56,491.79 |
| | | ಬಂಡವಾಳ | 13,002.21 | ... | 13,002.21 |
| 10 | ಸಮಾಜ ಕಲ್ಯಾಣ | ರಾಜಸ್ವ | 3,51,781.86 | ... | 3,51,781.86 |
| | | ಬಂಡವಾಳ | 47,495.62 | ... | 47,495.62 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 2,79,453.57 | ... | 2,79,453.57 |
| | | ಬಂಡವಾಳ | 12,099.00 | ... | 12,099.00 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 29,435.11 | ... | 29,435.11 |
| | | ಬಂಡವಾಳ | 20,801.21 | ... | 20,801.21 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 99,300.85 | 2.81 | 99,303.66 |
| | | ಬಂಡವಾಳ | 235.00 | ... | 235.00 |
| 14 | ಕಂದಾಯ | ರಾಜಸ್ವ | 3,20,787.33 | 3,000.00 | 3,23,787.33 |
| | | ಬಂಡವಾಳ | 131.04 | ... | 131.04 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 10,713.12 | ... | 10,713.12 |
| | | ಬಂಡವಾಳ | 1,947.00 | ... | 1,947.00 |
| 16 | ವಸತಿ | ರಾಜಸ್ವ | 1,48,787.83 | ... | 1,48,787.83 |
| | | ಬಂಡವಾಳ | 667.79 | ... | 667.79 |
| 17 | ಶಿಕ್ಷಣ | ರಾಜಸ್ವ | 14,86,031.22 | ... | 14,86,031.22 |
| | | ಬಂಡವಾಳ | 31,387.30 | ... | 31,387.30 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 1,26,936.95 | ... | 1,26,936.95 |
| | | ಬಂಡವಾಳ | 25,846.67 | ... | 25,846.67 |
| 19 | ನಗರಾಭಿವೃದ್ಧಿ | ರಾಜಸ್ವ | 6,21,317.40 | ... | 6,21,317.40 |
| | | ಬಂಡವಾಳ | 1,56,282.00 | ... | 1,56,282.00 |
| 20 | ಲೋಕೋಪಯೋಗಿ | ರಾಜಸ್ವ | 1,94,931.23 | ... | 1,94,931.23 |
| | | ಬಂಡವಾಳ | 3,30,010.97 | ... | 3,30,010.97 |
| 21 | ಜಲಸಂಪನ್ಮೂಲ | ರಾಜಸ್ವ | 98,243.45 | ... | 98,243.45 |
| | | ಬಂಡವಾಳ | 6,38,857.48 | ... | 6,38,857.48 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 3,94,950.21 | ... | 3,94,950.21 |
| | | ಬಂಡವಾಳ | 38,197.00 | ... | 38,197.00 |
| 23 | ಕಾರ್ಮಿಕ | ರಾಜಸ್ವ | 53,658.97 | ... | 53,658.97 |
| | | ಬಂಡವಾಳ | 2,200.00 | ... | 2,200.00 |
| 24 | ಇಂಧನ | ರಾಜಸ್ವ | 5,11,551.05 | 425.00 | 5,11,976.05 |
| | | ಬಂಡವಾಳ | 1,72,963.25 | ... | 1,72,963.25 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 27,258.69 | ... | 27,258.69 |
| | | ಬಂಡವಾಳ | 1,550.00 | ... | 1,550.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 22,267.93 | ... | 22,267.93 |
| | | ಬಂಡವಾಳ | 43,420.00 | ... | 43,420.00 |
| 27 | ಕಾನೂನು | ರಾಜಸ್ವ | 45,978.08 | ... | 45,978.08 |
| | | ಬಂಡವಾಳ | ... | ... | ... |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 12,457.66 | 289.52 | 12,747.18 |
| 29 | ಋಣ ಮೇಲುಸ್ತುವಾರಿ | ರಾಜಸ್ವ | ... | 7,50,000.00 | 7,50,000.00 |
| | | ಬಂಡವಾಳ | ... | 5,67,008.00 | 5,67,008.00 |
| | **ಜುಮ್ಲಾ** | | **9,394,103.27** | **1,376,398.11** | **10,770,501.38** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2012–13ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

# KARNATAKA LEGISLATIVE ASSEMBLY
## THIRTEENTH LEGISLATIVE ASSEMBLY
## FOURTEENTH SESSION

## THE KARNATAKA APPROPRIATION (No. 2) BILL, 2012
## (L.A. Bill No. 22 of 2012)

A Bill to authorize payment and appropriation of certain sums from and out of the Consolidated Fund of the State of Karnataka for the Services of the Financial year **2012-13**.

Whereas it is expedient to authorize payment and appropriation of certain sums from and out of the Consolidated fund of the State for the services of the Financial year **2012-13**.

Be it enacted by the Karnataka State Legislature in the Sixty third Year of the Republic of India as follows :-

**1. Short Title :** This Act may be called the Karnataka Appropriation (No. 2) Act, **2012**

**2. Issue of Rupees 10770501.38** Lakhs out of the Consolidated Fund of the State of Karnataka for the Financial year **2012-13:** From and out of the Consolidated fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of One lakh seven thousand seven hundred five crores one lakh thirtyeight thousand Rupees only (inclusive of the amount of Rupees 3589808.11 lakhs authorized to be paid in Karnataka Act No.16 of 2012) towards defrying the several charges which will come in the course of payment during the financial year 2012-13 in respect of the services specified in column 2 of the schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**
**(See Sections 2 and 3)**

**(₹. in Lakhs)**

| Demand No. | Service & Purpose | | Sums not exceeding | | Total |
|---|---|---|---|---|---|
| | | | voted by the Legislative Assembly | Charged on the consolidated Fund | |
| 1 | 2 | | 3 | 4 | 5 |
| 01 | Agriculture & Horticulture | Revenue | 3,97,149.73 | 26.89 | 3,97,176.62 |
| | | Capital | 12,425.00 | ... | 12,425.00 |
| 02 | Animal Husbandry and Fisheries | Revenue | 1,07,701.16 | 10.00 | 1,07,711.16 |
| | | Capital | 16,330.00 | ... | 16,330.00 |

| Demand No. | Service & Purpose | | Sums not exceeding | | Total |
|---|---|---|---|---|---|
| | | | voted by the Legislative Assembly | Charged on the consolidated Fund | |
| 1 | 2 | | 3 | 4 | 5 |
| 03 | Finance | Revenue | 11,72,557.72 | 34.96 | 11,72,592.68 |
| | | Capital | 447.00 | ... | 447.00 |
| 04 | Department of Personnel and Administrative Reforms | Revenue | 48,603.47 | 13,785.75 | 62,389.22 |
| | | Capital | 900.00 | ... | 900.00 |
| 05 | Home & Transport | Revenue | 3,35,513.13 | ... | 3,35,513.13 |
| | | Capital | 29,891.81 | ... | 29,891.81 |
| 06 | Infrastructure Development | Revenue | 1,855.00 | ... | 1,855.00 |
| | | Capital | 66,900.00 | ... | 66,900.00 |
| 07 | Rural Development and Panchayath Raj | Revenue | 4,73,206.75 | 1,800.00 | 4,75,006.75 |
| | | Capital | 2,19,161.00 | ... | 2,19,161.00 |
| 08 | Forest, Ecology and Environment | Revenue | 79,973.66 | 40,015.18 | 1,19,988.84 |
| | | Capital | 2,060.00 | ... | 2,060.00 |
| 09 | Co - operation | Revenue | 56,491.79 | ... | 56,491.79 |
| | | Capital | 13,002.21 | ... | 13,002.21 |
| 10 | Social Welfare | Revenue | 3,51,781.86 | ... | 3,51,781.86 |
| | | Capital | 47,495.62 | ... | 47,495.62 |
| 11 | Women and Child Development | Revenue | 2,79,453.57 | ... | 2,79,453.57 |
| | | Capital | 12,099.00 | ... | 12,099.00 |
| 12 | Information, Tourism and Youth Services | Revenue | 29,435.11 | ... | 29,435.11 |
| | | Capital | 20,801.21 | ... | 20,801.21 |
| 13 | Food and Civil Supplies | Revenue | 99,300.85 | 2.81 | 99,303.66 |
| | | Capital | 235.00 | ... | 235.00 |
| 14 | Revenue | Revenue | 3,20,787.33 | 3,000.00 | 3,23,787.33 |
| | | Capital | 131.04 | ... | 131.04 |
| 15 | Information Technology | Revenue | 10,713.12 | ... | 10,713.12 |
| | | Capital | 1,947.00 | ... | 1,947.00 |
| 16 | Housing | Revenue | 1,48,787.83 | ... | 1,48,787.83 |
| | | Capital | 667.79 | ... | 667.79 |
| 17 | Education | Revenue | 14,86,031.22 | ... | 14,86,031.22 |
| | | Capital | 31,387.30 | ... | 31,387.30 |
| 18 | Commerce and Industries | Revenue | 1,26,936.95 | ... | 1,26,936.95 |
| | | Capital | 25,846.67 | ... | 25,846.67 |

